# ಗೀತಾಂಜಲಿ

## (ಕಾವ್ಯ ನಿವೇದನೆ)

ವಿಶ್ವಕವಿ ರವೀಂದ್ರನಾಥ ಠಾಕೂರ್‌ರವರ

ಇಂಗ್ಲೀಷ್ ಗೀತಾಂಜಲಿಯ

(ಡಬ್ಲ್ಯು.ಬಿ.ಏಟ್ಸ ಕವಿಯ ಪೀಠಿಕೆ ಸಹಿತ)

ಕನ್ನಡಾನುವಾದ

**ಮಹಿಪಾಲ ದೇಸಾಯಿ**

ಚಿಕ್ಕಮ್ಯಾಗೇರಿ

**ಸಾಧನಾ ಪ್ರಕಾಶನ**

ಬೆಂಗಳೂರು

*GITANJALI* : A translation of poems of Rabindranath Tagore from English to Kannada by Mahipal Desai

First Edition 2003

Copies : One Thousand



Pages : xxxx + 118



Cover design by : S.B. Huded, Kadakol

Price : Calico : Rs. 75/-
Ordinary : Rs. 50/-

Published by
SADHANA PRAKASHANA
# 1444, 1st Main, 1st Cross
Judicial Layout, Opp. Jakkur Aerodrome
Bellary Road, Bangalore

Printed at :
SATHYASHRI PRINTERS PVT. LTD.
164, 5th Main Road
Chamarajpet, Bangalore - 560 018
Phone : 6525736

ಶಿರಡಿಯ ಶ್ರೀ ಸಾಯಿಬಾಬಾ ಅವರ
ಪಾದಪದ್ಮಗಳಿಗೆ
ಈ ಕೃತಿಯು ಅರ್ಪಿತ

# ಮುನ್ನುಡಿ

ಮಹಿಪಾಲ ದೇಸಾಯಿ ನನಗೆ ಅನೇಕ ವರ್ಷಗಳ ಆತ್ಮೀಯರು. ಈ ಆತ್ಮೀಯತೆ ಸುರುವಾದದ್ದು ನಲವತ್ತು ವರ್ಷಗಳ ಹಿಂದೆ. ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ನಾನು ಇಂಗ್ಲೀಷ್ ಪ್ರಾಧ್ಯಾಪಕನಾಗಿ ನೌಕರಿ ಹಿಡಿದಾಗ, ಪ್ರಾರಂಭದ ವರ್ಷಗಳಲ್ಲಿ ಮಹಿಪಾಲ ನನ್ನ ವಿದ್ಯಾರ್ಥಿಯಾಗಿದ್ದರು. ಅವರ ಎರಡು ಕವನ ಸಂಕಲನ ಪ್ರಕಟವಾಗಿವೆ : 1984ರಲ್ಲಿ 'ಬಗೆ' ಮತ್ತು 1995 ರಲ್ಲಿ 'ದಾರಿ'.

ಈ ಎರಡೂ ಸಂಕಲನಗಳಲ್ಲಿ ಅವರು ಖಲಿಲ್ ಗಿಬ್ರಾನನ ಎರಡು ಸಾಲುಗಳನ್ನು ಮುನ್ನುಡಿಯಾಗಿ ಬಳಸಿಕೊಂಡಿದ್ದಾರೆ :

ಹೃದಯ ಮೋಹಕವಾದ ಜ್ಞಾನವೇ ಕಾವ್ಯ
ಮನದೊಳಗೆ ಉಲಿಯುತ್ತಿರುವ ಕಾವ್ಯವೇ ಜ್ಞಾನ.

ಮಹಿಪಾಲರ ಮಾತುಗಳಿವು : "ಕಲಿತಿದ್ದು ವಿಜ್ಞಾನ, ಹಿಡಿದದ್ದು ವಕೀಲಿ ಮತ್ತು ನ್ಯಾಯದಾನ ವೃತ್ತಿ. ಹೀಗಾಗಿ, ಸಾಹಿತ್ಯ ಕೃಷಿ ಮಾಡಿದ ವ್ಯಕ್ತಿಯೇ ನಾನಲ್ಲ. ಆದರೂ ಯಾವುದೋ ಒಂದು ಸಂಗತಿ ಮನಸ್ಸಿಗೆ ಅತಿಯಾಗಿ ಮುಟ್ಟಿದಾಗ ಶಬ್ದಗಳು ಸ್ಫುರಿಸಿ ಬಂದಾಗ ಅದನ್ನು ಕಾವ್ಯವಾಗಿಸುವ ಪ್ರಯತ್ನ ಮಾಡುತ್ತ ಬಂದಿದ್ದೇನೆ." ......."ಹುಡುಕಾಟವೇ ಇಲ್ಲಿನ ಕವಿತೆಗಳಿಗೆ ಜೀವಾಳ. ಯಾವುದೋ ಅಗೋಚರ ಶಕ್ತಿ ಈ ಬದುಕಿನಲ್ಲಿ ಹಾಸು ಹೊಕ್ಕಿದೆ. ಅದಕ್ಕೆ ಶರಣುಹೋಗದೆ ಬೇರೆ ವಿಧಿಯಿಲ್ಲ. ಆದರೂ ಕರ್ತವ್ಯಕ್ಕೆ ಅದರದೇ ಆದ ಸ್ಥಾನವಿದೆ ಎಂಬ ಭಾವನೆಯ ತಳಹದಿಯ ಮೇಲೆ ಈ ಕವಿತೆಗಳು ನಿಂತಿವೆ. ಪ್ರಕೃತಿಯಲ್ಲಿ ಗೋಚರಿಸುವ ಸೌಂದರ್ಯ, ನಮ್ಮೆದೆಗಳಲ್ಲಿರುವ ತಳಮಳ ಮತ್ತು ಅಗೋಚರ ಶಕ್ತಿ ಇವುಗಳ ನಡುವೆ ಒಂದು ಸಂಬಂಧವಿದೆ."

ಈ ಮಾತುಗಳ ಪ್ರಸ್ತಾಪ ಯಾಕೆ ಅಂದರೆ ಪ್ರತಿಯೊಬ್ಬ ಕಲಾವಿದನ ಹಿನ್ನೆಲೆಯಲ್ಲಿ ಅಪ್ರಜ್ಞಾಪೂರ್ವಕವಾಗಿ ಕೆಲವು ಪರಿಕಲ್ಪನೆಗಳು ಕೆಲಸ ಮಾಡುತ್ತವೆ. ಇದನ್ನೇ ಕೆಲವರು 'ದರ್ಶನ' ಅನ್ನುತ್ತಾರೆ. ಮಹಿಪಾಲರ 'ದರ್ಶನ'ದ ಎಳೆಗಳನ್ನು ಹಿಡಿದು ಸಾಗಿದರೆ, ಅವರು ಯಾಕೆ ರವೀಂದ್ರನಾಥ

ಠಾಕೂರ ಅವರ 'ಗೀತಾಂಜಲಿ'ಯ ಗುಂಗು ಹತ್ತಿಸಿಕೊಂಡು ರವೀಂದ್ರ ಕಾವ್ಯವನ್ನು ಕನ್ನಡಕ್ಕೆ ತರಲು ಮುಂದಾದರು ಎಂಬುದು ಅರ್ಥವಾಗುತ್ತದೆ. ಮಹಿಪಾಲದೇಸಾಯಿ ಅವರಂಥ ಸಾವಿರಾರು ನದಿಗಳ ಕೂಡಲ ಸಂಗಮವೇ ರವೀಂದ್ರನಾಥ ಠಾಕೂರ. ಸಾಹಿತ್ಯಕ್ಕೆ ಮೀಸಲಾದ ನೊಬೆಲ್ ಬಹುಮಾನ ವನ್ನು ಭಾರತಕ್ಕೆ ತಂದುಕೊಟ್ಟು ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದ ವಿಶ್ವಕವಿ ರವೀಂದ್ರರು ಭಾರತದ ಜೀವಮುಖೀ ಪರಂಪರೆಯ ಹಾದಿಯಲ್ಲಿ ಮುಖ್ಯ ಮೈಲುಗಲ್ಲು. ಅವರ 'ಗೀತಾಂಜಲಿ', ವೈಯಕ್ತಿಕತೆಯ ಎಲ್ಲೆಯನ್ನು ಮೀರಿ, ದೇಶ–ಕಾಲ–ಭಾಷೆ–ಧರ್ಮ–ಸಂಸ್ಕೃತಿಗಳ ಕ್ಷಿತಿಜಗಳನ್ನು ವಿಸ್ತರಿಸುವ ಸಮಷ್ಟಿ ಧ್ವನಿಯಾಗಿದೆ. ನಮ್ಮ ದೇಶದ ಪ್ರಾಚೀನತೆಯು ಇಪ್ಪತ್ತನೆಯ ಶತ ಮಾನದ ಆಧುನಿಕತೆಗೆ ಮುಖಾಮುಖಿಯಾಗುವ ಸಂಕ್ರಮಣ ಸನ್ನಿವೇಶದಲ್ಲಿ 'ನವ ಮಾನವ'ನ ಆತ್ಮನಿವೇದನೆಯಾಗಿ ಹೊರಹೊಮ್ಮಿದ್ದು 'ಗೀತಾಂಜಲಿ'.

ಮೊದಲು ಬಂಗಾಲಿಯಲ್ಲಿ 'ಗೀತೆ'ಗಳಾಗಿಯೇ ರೂಪು ತಾಳಿ, ಕವಿಯಿಂದಲೇ 'ಗದ್ಯಾನುವಾದ'ಗೊಂಡು ಇಂಗ್ಲೀಷಿನಲ್ಲಿ ಅರಳಿ ನಿಂತ 'ಗೀತಾಂಜಲಿ' ಜಗತ್ತಿನ ಅನೇಕ ಭಾಷೆಗಳಲ್ಲಿ ಅವತಾರ ತಾಳಿದೆ. ಇಪ್ಪತ್ತನೆಯ ಶತಮಾನದ ಪ್ರಾರಂಭದ ಕನ್ನಡ ಸಂಸ್ಕೃತಿ ಮತ್ತು ಸಾಹಿತ್ಯದ ಪುನರುಜ್ಜೀವನದ ಪ್ರಕ್ರಿಯೆಯ ಮೇಲೆ ರವೀಂದ್ರ–ಕಾವ್ಯ ಸಾಕಷ್ಟು ಪ್ರಭಾವ ಬೀರಿದೆ. ನವೋ ದಯದ ನಮ್ಮ ಅನೇಕ ಕವಿಗಳು ಈ ಗೀತೆಗಳನ್ನು ನಮ್ಮ ಭಾಷೆಗೆ ತಂದಿದ್ದಾರೆ.

ಮಹಿಪಾಲ ದೇಸಾಯಿ ಅವರ ಈ ಅನುವಾದ ಕೃತಿಯ ಹೆಚ್ಚುಗಾರಿಕೆ 'ಯೆಂದರೆ : ಮೊತ್ತಮೊದಲು 1912ರಲ್ಲಿ 'ಇಂಡಿಯನ್ ಸೊಸೈಟಿ'ಯಿಂದ ಪ್ರಕಾಶಿತಗೊಂಡು, ಮಾರ್ಚ್ 1913ರಲ್ಲಿ 'ಮ್ಯಾಕ್‌ಮಿಲನ್ ಆ್ಯಂಡ್ ಕಂಪನಿ' ಯಿಂದ 'ಗೀತಾಂಜಲಿ' ಪ್ರಕಟವಾದಾಗ, ಶ್ರೇಷ್ಠ ಇಂಗ್ಲೀಷ್ ಕವಿ ಡಬ್ಲ್ಯೂ.ಬಿ. ಯೇಟ್ಸ್ ಅವರು ಬರೆದ 'ಮುನ್ನುಡಿ' (Introduction) ಯನ್ನೂ ಕನ್ನಡಕ್ಕೆ ಅನುವಾದಿಸಿದ್ದು. ರವೀಂದ್ರ ಕಾವ್ಯವನ್ನು ಬಾಯ್ತುಂಬ ಪ್ರಶಂಸಿಸುವ ಯೇಟ್ ಹೇಳುತ್ತಾರೆ. "ಮೂಲ ಬಂಗಾಳಿ ಭಾಷೆಯಲ್ಲಿರುವ ಈ ಕವಿತೆಗಳು ಸೂಕ್ಷ್ಮಾತಿ ಸೂಕ್ಷ್ಮ ಸ್ವರತರಂಗಗಳಿಂದ ಕೂಡಿದೆ ಮತ್ತು ನವ್ಯ ರೀತಿಯ ಛಂದಸ್ಸಿನ ಬಣ್ಣಗಳಲ್ಲಿ ಮೂಡಿಬಂದ ನಾಜೂಕುಗಳನ್ನು ಯಾವುದೇ ಭಾಷೆಗೆ

ತರ್ಜುಮೆಗೊಳಿಸುವುದು ಶಕ್ಯವಿಲ್ಲ. ಆದರೆ ನಾನು ನನ್ನ ಜೀವನಪರ್ಯಂತ ಬರೆಯಬೇಕೆಂದು ಕನಸುಕಂಡ ವಿಚಾರಗಳನ್ನು ಇಂಗ್ಲೀಷ್‌ಗೆ ತರ್ಜುಮೆ ಗೊಂಡ ಈ ಕವಿತೆಗಳು ಪ್ರಕಟ ಗೊಳಿಸಿವೆ. ಈ ಕವಿತೆಗಳು ಅತ್ಯುತ್ಕೃಷ್ಟ ನೆಲದೊಳಗಿಂದ ನಿರಾಯಾಸವಾಗಿ ಹುಲ್ಲು ಹುಟ್ಟಿಬರುವ ತೆರನ ಜನ್ಮ ತಳೆದಂತೆ ಭಾಸವಾಗುತ್ತದೆ".

ಮೂಲ ಕವಿತೆಗಳ ಆಶಯ ಮತ್ತು ಅಭಿವ್ಯಕ್ತಿಗೆ ಧಕ್ಕೆ ಉಂಟಾಗದ ರೀತಿಯಲ್ಲಿ ಮಹಿಪಾಲರ ಕನ್ನಡ ಅನುವಾದಗಳು ರೂಪುಗೊಂಡಿವೆ. ಮುದ್ದಣನ ರೀತಿಯಲ್ಲಿ, ಅಥವಾ ರಾಮಾಯಣ ದರ್ಶನಂ ಬರೆದ ಕುವೆಂಪು ರೀತಿಯಲ್ಲಿ ಹಳಗನ್ನಡದ ಛಾಯೆ ಇದ್ದರೂ ಈ ಅನುವಾದಗಳ ಭಾಷೆ ಸರಳ ಮತ್ತು ಪಾರದರ್ಶಕ.

ಉದಾಹರಣೆಗೆ :

ಸಂತೆಯ ಸಮಯ ಮುಗಿದು
ತಮ್ಮ ಕೆಲಸಗಳನ್ನೆಲ್ಲ ಜನ ಪೂರೈಸಿ ಕೊಂಡಿಹರು.
ನನ್ನ ಕರೆಯ ಬಂದವರು
ಮುನಿಸಿನಲಿ ಮರಳಿ ಹೋಗಿಹರು.

*

ನನ್ನ ತಾಣದೆಡೆ ಪಯಣಕ್ಕೆ
ನಾನೋರ್ವನೇ ಹೊರಟೆ. ಆದರೆ
ಈ ನಿಶ್ಶಬ್ದ ರಾತ್ರಿಯಲಿ
ನನ್ನ ಬೆಂಬತ್ತಿರುವವರಾರು?

*

ನಿನ್ನಿಂದ ನಾನೇನನೂ ಕೇಳಲಿಲ್ಲ
ನನ್ನ ಹೆಸರನೂ ನಿನಗೆ ನಾ ಹೇಳಲಿಲ್ಲ
ನೀನು ಹೊರಟು ನಡೆದಾಗ
ನಾನು ಮೌನದಲಿ ನಿಂತೆ

*

ಕವಿಯ ನುಡಿಗಳಿಂ ಜನರು
ತಂತಮ್ಮ ಮನಕೆ, ಮುದಕೊಡುವ ಅರ್ಥಗಳ
ಪಡೆವರು. ಆದರೂ
ಅವುಗಳ ಅಂತಿಮ ಅರ್ಥ
ನಿನ್ನನೇ ತೋರುವದು.

*

ದಿನವಿಡೀ ನಡೆದ ದಾರಿಯಲಿ
ನೋವು ನಲಿವುಗಳ ಈ ಜಗದ ಗೂಢತೆಯೆಡೆಗೆಲ್ಲ
ಈ ಹಾಡುಗಳೆ ನನ್ನ ಕೊಂಡೊಯ್ದಿಹವು.
ಕೊಟ್ಟಕೊನೆಗೆ, ಈ ಸಂಜೆಯ ಸಮಯದಿ
ಪಯಣದಂತ್ಯದಲಿ
ಆವ ರಾಜಭವನದ ಹೆಬ್ಬಾಗಿಲಿಗೆ
ನನ್ನ ಕರೆತಂದಿಹವು?

ಮಹಿಪಾಲರ ಎರಡನೇ ಸಂಕಲನ 'ದಾರಿ'ಗೆ ಮುನ್ನುಡಿ ಬರೆದ ಹಿರಿಯ ಕವಿ ಡಾ॥ ಸಿದ್ದಯ್ಯ ಪುರಾಣಿಕ ಹೇಳುತ್ತಾರೆ. ''ಇದು ಅವರ ಪ್ರಥಮ ಸಂಗ್ರಹದ ಮುಂದುವರಿಕೆಯೂ ಹೌದು, ಹೊಸದಾರಿಯ ಹುಡುಕಾಟವೂ ಹೌದು.''

ನನ್ನ ಹಾರೈಕೆಯೂ ಅಷ್ಟೇ : ಮಹಿಪಾಲರ ಈ ಅನುವಾದ ಕೃತಿ, ಅವರು ಶ್ರದ್ಧೆಯಿಂದ ಕೈಕೊಂಡ ಪ್ರೀತಿಯ ಕಾಯಕ. ಅವರ ಹುಡುಕಾಟದ ಹಾದಿಯಲ್ಲಿ ಇದೊಂದು ಅರ್ಥಪೂರ್ಣ ಮಜಲು. ಇಂಥ ಅನೇಕ ಮಜಲುಗಳನ್ನು ದಾಟುವ ನಿರಂತರ ದಾರಿ ಅವರದಾಗಿರಲಿ.

ಪ್ರೊ॥ ಚಂದ್ರಶೇಖರ ಪಾಟೀಲ

'ಸಂಕ್ರಮಣ'
ಬೆಂಗಳೂರು
21 ಆಗಸ್ಟ್ 2003

# ನನ್ನ ಮಾತು

ಸತ್ಯದ ಹುಡುಕಾಟ ಹೆಚ್ಚಿದಷ್ಟೂ ಮನುಷ್ಯ ಅಂತರ್ಮುಖಿಯಾಗುತ್ತಾನೆ. ಹುಡುಕಾಟ ತೀಕ್ಷ್ಣವಾದಷ್ಟೂ ಆತನ ಅಂತರ್ಮುಖತೆ ಆಳವಾಗುತ್ತ ಹೋಗಿ ಆತ ಅದ್ಭುತ ಮತ್ತು ನಿಗೂಢ ಅನುಭವಗಳನ್ನು ಪಡೆಯುತ್ತಾನೆ. ಆ ಅನುಭವಗಳನ್ನು ಇನ್ನೊಬ್ಬರಿಗೆ ತಿಳಿಹೇಳುವದು ಅಶಕ್ಯವಾದ ಕಾರ್ಯ. ಅವುಗಳನ್ನು ಶಬ್ದಗಳಲ್ಲಿಡುವದು ಕಷ್ಟಸಾಧ್ಯ. ಶಬ್ದಗಳಲ್ಲಿ ಅವುಗಳನ್ನು ಹಿಡಿದಿಡಲು ಶಕ್ಯವಾದರೂ ಓದುಗನ ಮನಸ್ಸನ್ನು ಅವು ಹಿಡಿಯುವಂತೆ ಬರೆಯುವದು ಇನ್ನೂ ಕಷ್ಟ. ಓದುಗನ ಮನಸ್ಸನ್ನು ಅವು ಹಿಡಿದರೂ, ಓದುಗನಿಗೆ ಅವುಗಳ ಅರ್ಥವಾಗುವ ಭರವಸೆಯೂ ಇಲ್ಲ. ಎಂತಹ ಅದ್ಭುತ ಭಾವನೆ ಇದ್ದರೂ, ನಿಗೂಢತೆಯ ಕಾರಣದಿಂದ ಓದುಗನಿಗೆ, ಅದು ತಿಳಿಯದೇ, ಅದೊಂದು ತೀರಾ ಸಾಮಾನ್ಯ ಬರಹವಾಗಿ ಕಾಣಬಹುದು. ಇಂತಹ ನಿಗೂಢ ಬರಹಗಳ ಗುಚ್ಛವೇ 'ಗೀತಾಂಜಲಿ' ರವೀಂದ್ರರಂತಹ ಅಸಾಮಾನ್ಯ ಕವಿಗಲ್ಲದೇ, ಬೇರೆಯವರಿಗೆ ಇಂತಹ ಬರಹಗಳನ್ನು ಬರೆಯುವದು ಶಕ್ಯವಿಲ್ಲ. ಅವರು ಸತ್ಯದ ಹುಡುಕಾಟದಲ್ಲಿ ಅಸಾಮಾನ್ಯ ಆಳವನ್ನು ತಲುಪಿದ್ದರಲ್ಲದೇ, ತನಗೆ ದೊರೆತಿದ್ದ ಅನುಭವಗಳನ್ನು ಇನ್ನೊಬ್ಬರಿಗೆ ತಿಳಿಯುವಂತೆ ಬರೆಯುವ ದೈತ್ಯ ಪ್ರತಿಭೆಯನ್ನು ಹೊಂದಿದ್ದರು. ಅದಕ್ಕೆ ಸಾಕ್ಷಿಯಾಗಿ ಅವರ ಎಷ್ಟೋ ಕೃತಿಗಳಿರಬಹುದು. ಆದರೆ ಈ ವಿಷಯಕ್ಕೆ ಸಂಬಂಧಿಸಿದಂತೆ ಅವರ ಎರಡು ಮುಖ್ಯ ಕೃತಿಗಳು – "ಗೀತಾಂಜಲಿ" ಮತ್ತು "ಸಾಧನಾ". ಗೀತಾಂಜಲಿಯಲ್ಲಿ ಅವರು ಪ್ರಕಟಗೊಳಿಸಿದ ಭಾವನೆಗಳ ಗದ್ಯರೂಪವೇ "ಸಾಧನಾ". ಗೀತಾಂಜಲಿ ಕಾವ್ಯ ನಿವೇದನೆಯಾದರೆ, "ಸಾಧನಾ" ಲಲಿತ ಪ್ರಬಂಧಗಳ ಸಂಕಲನ.

ದೇವರನ್ನು ತನ್ನೊಡೆಯನೆಂದೂ, ಒಮ್ಮೊಮ್ಮೆ ಪ್ರಿಯತಮನೆಂದೂ, ಸಂಬೋಧಿಸುತ್ತ, ಮತ್ತೊಮ್ಮೆ ಸತ್ಯವೇ ದೇವರೆನ್ನುತ್ತ, ಮಗುದೊಮ್ಮೆ ಇಲ್ಲಿರುವ ಚರಾಚರ ವಸ್ತುಗಳು ದೃಗ್ಗೋಚರ ಮತ್ತು ಕೇವಲ ಬುದ್ಧಿಗೆ ಅಥವಾ

ಅನುಭವಕ್ಕೆ ದೊರಕುವ ವಿಷಯ, ಸಂಗತಿಗಳಿಗೇ ದೇವರೆನ್ನುತ್ತ ಸುಖ, ದುಃಖಗಳು ದೇವರೆಡೆಗೆ ನಮ್ಮನ್ನು ತಳ್ಳುವ ಸಾಧನೆಗಳೆಂದೂ, ಅವುಗಳನ್ನು ದೇವರೇ ಕಳುಹಿಸುತ್ತಾನೆಂದೂ, ಬರೆಯುತ್ತ ಹೋಗುವ ರವೀಂದ್ರರಿಗೆ – , ಈ ಜಗತ್ತಿನಲ್ಲಿ, ಈ ಜೀವನದಲ್ಲಿ, ಕಾಣುವ, ಕಾಣದಿರುವ ಪ್ರತಿಯೊಂದು ವಸ್ತು, ಸ್ಥಿತಿ, ಸಂಗತಿಗಳಲ್ಲಿ, ಮನುಷ್ಯನ ತ್ರಿಗುಣಗಳಲ್ಲಿ ಮನದ ವಿಕಾರಗಳಲ್ಲಿ ಎಲ್ಲೆಲ್ಲೂ ಆ ದೇವರೇ, ಆತನ ಪ್ರೇಮವೇ ಕಾಣುತ್ತದೆ. ಕೊನೆಗೆ ಸಾವನ್ನೂ ಪ್ರೀತಿಸುತ್ತಾರೆ. ತಾನೂ ಸಕಲ ಚರಾಚರ ವಸ್ತುಗಳೂ, ದೇವರೂ, ಎಲ್ಲವೂ ಒಂದೇ ಎಂದು ಹೇಳುತ್ತಾರೆ. ಹಾಗೆ ಹೇಳುವ ಗೀತೆಯಾದರೂ ಎಂತಹ ಅದ್ಭುತ!

ನನ್ನ ಧಮನಿಗಳಲಿ ಅಹರ್ನಿಶಿ
ಹರಿಯುತಿಹ ಪ್ರಾಣ ಚೇತನದ ಹೊಳೆಯೇ
ಜಗದ ತುಂಬೆಲ್ಲ ಹರಿದು
ಸಮರಸದ ನರ್ತನವ ನರ್ತಿಸುತಲಿಹುದು.

ಆ ಪ್ರಾಣಚೇತನವೇ, ಬುವಿಯ ಧೂಳಿನೊಳಗಿಂದ
ಹುಲ್ಲಿನ ಅಗಣಿತ ಗರಿಗಳಲಿ ಹೊರಗೆಸೆದು
ಎಸಳಿನ ತಳಮಳಿಸುವ ತೆರೆಯಾಗಿ, ಮೇಣ್
ಹೂವಾಗಿ ಹೊರಹೊಮ್ಮುವುದು.

ಆ ಪ್ರಾಣಚೇತನವೇ
ಹುಟ್ಟು, ಸಾವಿನ ಸಾಗರದ
ಉಬ್ಬರಿಳಿತದ ಪ್ರವಾಹದ ತೊಟ್ಟಿಲಲಿ
ತೂಗಲ್ಪಡುತಲಿಹುದು.

ಈ ಪ್ರಾಣಚೇತನದಿಂದ ತುಂಬಿದ ಜಗದ ಸ್ಪರ್ಶವೇ
ನನ್ನಂಗಗಳಿಗೆಲ್ಲ ವೈಭವವ ತಂದಿಹುದನು,

ಅನುಭವಿಸುತಿಹೆನು, ಮೇಣ್,
ಯುಗ ಯುಗಗಳ, ಪ್ರಾಣ ಚೇತನದ
ತುಡಿತಗಳೊಳಗಿಂದ ಬಂದ ನನ್ನ ಹೆಮ್ಮೆ
ಈ ಚಣದಿ ನನ್ನ ನೆತ್ತರಲಿ ನರ್ತಿಸುತಲಿಹುದು. (69ನೇ ಕವಿತೆ)

ಈಶಾವಾಸ್ಯ ಉಪನಿಷತ್ತಿನ 6 ಮತ್ತು 7ನೇ ಶ್ಲೋಕ*ಗಳಲ್ಲಿ ಹೇಳಿದ ಓತ-ಪ್ರೊತ ವಿಶ್ವಪ್ರೇಮದ ಭಾವವನ್ನೇ ಈ ಮೇಲಿನ ಕವಿತೆ ಪ್ರಕಟಿಸು ತ್ತಾದರೂ, ಈ ಜಗದಲ್ಲಿ ಸಾಮರಸ್ಯವಿದೆ, ಯುಗಯುಗಗಳಿಂದ ಬಂದ ತಾನು ಅನಂತನೆಂಬ ಹೆಮ್ಮೆ ಇದೆ, ಎನ್ನುವ ವಿಶೇಷತೆಗಳನ್ನು ಗಮನಿಸಬೇಕು.

ಬದುಕಿನ ಬರಿಯ ಸುಂದರ ಮುಖ ಮಾತ್ರ ರವೀಂದ್ರರಿಗೆ ಬೇಡ. ಭಯಾನಕತೆಯೂ ಇವರಿಗೆ ಅಚ್ಚುಮೆಚ್ಚು. ಇವೆರಡೂ ದೇವರೆಡೆಯಿಂದಲೇ ತನ್ನೆಡೆಗೆ ಬರುತ್ತವೆ. ಆದರೂ ಭಯವೇ ತನ್ನನ್ನು ಸರಿಯಾದ ಪಥದ ಮೇಲೆ ನಡೆಸುವದೆಂದು, ಅದರ ಬಗ್ಗೆ ಹೆಚ್ಚು ಮಮತೆ. ರುದ್ರ ಮನೋಹರತೆಯನ್ನು ಇವರು ಅಭಿವ್ಯಕ್ತಿಸುವ ರೀತಿ ಎಷ್ಟು ಸೂಕ್ಷ್ಮ, ನಿಗೂಢ ಮತ್ತು ಭವ್ಯ!

---

* ಶ್ಲೋಕ 6 : ಯಸ್ತು ಸರ್ವಾಣಿಭೂತಾನಿ ಆತ್ಮನ್ಯೇವಾನುಪಶ್ಯತಿ ।
ಸರ್ವಭೂತೇಷು ಚಾತ್ಮಾನಂ ತತೋನ ವಿಜುಗುಪ್ಸತೇ ॥

(ಯಾರು ನಿರಂತರವಾಗಿ ಆತ್ಮನಲ್ಲಿ ಎಲ್ಲವನ್ನೂ, ಎಲ್ಲ ಭೂತಗಳಲ್ಲೂ ಆತ್ಮನನ್ನು ಕಾಣುತ್ತಾರೋ ಅಂಥವರು ಪುನಃ ಯಾರಿಗಾಗಿಯೇ ಆಗಲಿ, ಯಾವುದಕ್ಕೇ ಆಗಲಿ ಜುಗುಪ್ಸೆಪಡುವದಿಲ್ಲ.)

ಶ್ಲೋಕ 7 : ಯಸ್ಮಿನ್ ಸಾರ್ವಾಣಿ ಭೂತಾನಿ ಆತ್ಮೈವಾಭೂದ್ವಿಜಾನತಃ
ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ

(ಯಾರ ದೃಷ್ಟಿಗೆ ಸರ್ವಭೂತಗಳಲ್ಲಿಯೂ ಆತ್ಮನೇ ಕಂಡು ಬರುತ್ತಾನೋ ಅಂಥ ಏಕತ್ವವನ್ನು ನಿರಂತರವೂ ಕಾಣುವ ವಿಜ್ಞಾನಿಯಾದ ಮನುಷ್ಯನಿಗೆ ಮೋಹ ಎಲ್ಲಿಯದು, ಶೋಕವೆಲ್ಲಿಯದು?)

ಅಗಣಿತ ಬಣ್ಣಗಳ ತಾರೆಗಳ ಬಳಸಿ
ಕಟೆದಿರುವ ನಿನ್ನ ಕೈಯ ಕಂಕಣ
ಎಷ್ಟು ಸುಂದರವಿಹುದು?
ಆದರೆ, ಕ್ರೋಧತಪ್ತ ಸಂಜೆಯ ಸೂರ್ಯನ, ಕೆಂಪು ಕಿರಣದಲಿ
ಮಿಂಚುವ ಗರುಡನ ತೆರೆದ ರೆಕ್ಕೆಗಳಂತೆ,
ಹೊಳೆಯುತಿಹ ಮಿಂಚು ಬಳ್ಳಿಯ ಡೊಂಕಿನ ನಿನ್ನ ಖಡ್ಗ
ಹೆಚ್ಚು ಸುಂದರವೆನಗೆ.

ಸಾವಿನ ಕೊನೆಯ ಹೊಡೆತ ತರುವ ನೋವಿಗೆ,
ಬದುಕು, ಕೊನೆಗೊಮ್ಮೆ ಆತ್ಮಾನಂದದಲಿ ನಲುಗುವಂತೆ
ಆವೇಶದಲಿ ಆದುರುತಿದೆ ನಿನ್ನ ಖಡ್ಗ
ಭವದ ಬಂಧನಗಳನೆಲ್ಲ ಸುಡುವ
ಶುದ್ಧ ಉರಿಯ ಒಂದು ತೀಕ್ಷ್ಣ ನಾಲಗೆಯು
ಹೊಳೆಯುವಂದದಿ ಹೊಳೆಯುತಿಹುದು.

ತಾರೆಗಳ ರತ್ನದಿಂ, ಸಿಂಗರಿಸಿದ
ನಿನ್ನ ಕೈಯ ಕಂಕಣ, ಸುಂದರವಾಗಿಹುದು.
ಆದರೆ, ಓ ಸಿಡಿಲಿನೊಡೆಯನೆ,
ನಿನ್ನ ಖಡ್ಗಕೆ ಸಹಿಸಲಸದಳದ ಚಲುವು.
ನೋಡಲು ರುದ್ರಮನೋಹರ
ನೆನೆಯಲು ಭಯಾನಕ. (53ನೇ ಕವಿತೆ)

ತನ್ನೊಳಗೂ, ಹೊರಗೂ ತುಂಬಿರುವದೆಲ್ಲ ಆ ಭಗವಂತನೆ, ಆತನ ಪ್ರೇಮವೇ. ತಾನು ಎಂಬುದೆಲ್ಲವನ್ನೂ ಆತನಿಗರ್ಪಿಸಿಕೊಂಡ ಅರಿವು, ಅದನ್ನು ಹೇಳುವ ಸೌಂದರ್ಯ ಹೀಗಿದೆ–

ತನ್ನ ಗೌಪ್ಯ ಆಳವಾದ ಸ್ಪರ್ಶಗಳಿಂದ
ನನ್ನಿರುವನೆಚ್ಚೆರಿಸುವಾತ,
ಆತನೇ, ನನ್ನ ಹೃದಯಾಂತರಾಳದಲ್ಲಿರುವಾತ.

ಈ ಕಂಗಳ ಮೇಲೆ, ತನ್ನ ಮೋಹಮಂತ್ರನೆಸೆದು
ಸುಖ ದುಃಖಗಳ ಏರಿಳಿತದ ಸ್ವರಲಯವ ಹೊರಡಿಸಿ
ನನ್ನ ಹೃದಯದ ತಂತಿಗಳ ಮಿಡಿದು
ಆನಂದದಲಿ ನುಡಿಸುವಾತ,
ಆತನೇ, ನನ್ನ ಹೃದಯಾಂತರಾಳದಲ್ಲಿರುವಾತ. (72ನೇ ಕವಿತೆ)

ದೇವರಿಂದ ಬೇರ್ಪಟ್ಟು ಆತನಿಂದ ಒಂದಾಗಬೇಕೆಂದು ನಮ್ಮ ಆತ್ಮ ತಹತಹಿಸುತಿರದಿದ್ದ ಪಕ್ಷದಲ್ಲಿ ಈ ಜಗದೊಳಗಿನ ಸೌಂದರ್ಯ ನಮ್ಮ ಮನಕ್ಕೆ ಮುದಕೊಡುತ್ತಿತ್ತೆ? ಅಂತಲೇ ರವೀಂದ್ರರು ಹೀಗೆ ಬರೆಯುತ್ತಾರೆ.

ಹಸಿರು ಚಿಗುರುಗಳ ಮೇಲೆ ನರ್ತಿಸುತಿಹ ಹೊನ್ನಗಿರಣಗಳು
ಮೇಣ್, ನೀಲ ಬಾನಂಗಳದಲಿ ತೇಲಿ ಸರಿಯುತಿಹ ಮೋಡಗಳು
ಮೇಣ್, ನನ್ನ ಮೊಗಕೆ ತಂಪನೀವುತ ಬೀಸುತಿಹ ನಸುಗಾಳಿ
ಇವು, ನಿನ್ನ ನಲ್ಮೆಯಲ್ಲದೇ ಬೇರೇನೂ ಅಲ್ಲವೆಂದು
ನಾ ಬಲ್ಲೆ - ನನ್ನೊಡೆಯ. (59ನೇ ಕವಿತೆ)

ವಿಶ್ವಾತ್ಮನಿಂದ ತನ್ನನ್ನು ಬೇರ್ಪಡಿಸಿ, ತನಗೆ ದುಃಖವನ್ನು ತಂದದ್ದೂ ತನ್ನ ಅಹಂಕಾರವೇ ಮತ್ತು ಭಗವಂತನ ಮಾಯೆಯೇ ಎಂದು ಅವರು ಹಲುಬುವ ಭವ್ಯ ರೀತಿಯನ್ನು ನೋಡಿ-

ನನ್ನ ಹಮ್ಮನೆ ಬೆಳೆಸಿ ಸುತ್ತೆಲ್ಲ ಹೊರಳಿಸಿ
ಕಣ್ಣು ಕೋರೈಸುವ ನಿನ್ನ ಕಿರಣಗಳ ಮೇಲೆ,
ನನ್ನ ಬಣ್ಣಗಳ ಛಾಯೆಯನು ಮೂಡಿಸುವ ಚಪಲವೆನಗೆ
ಇಂತಿಹುದು ನಿನ್ನ ಮಾಯೆ.

ನಿನ್ನಿರುವಿನೊಳಗೆ, ನೀನೆ ತಡೆಗಳ ಬೆಳೆಸಿ
ನೀನೆ ನೂರಾರು ಸಾವಿರಾಗಿ
ಅಗಣಿತ ಹೆಸರಿನಿಂ ನಿನ್ನ ನೀನೇ ಕರೆದುಕೊಂಡಿರುವೆ.
ಇಂತು ನಿನ್ನಿಂದ ಬೇರಾದ ತುಣುಕೊಂದು
ನಾನಾಗಿರುವೆನಿಲ್ಲಿ. (71ನೇ ಕವಿತೆ)

ಶರತ್ಕಾಲದ ಆಗಸದಿ
ಗೊತ್ತುಗುರಿ ಇಲ್ಲದೇ
ಅಂಡಲೆವ ಬಿಳಿ ಮುಗಿಲ ತುಣುಕು ನಾನು.
ಪ್ರಕಾಶಮಾನನಾದ ಓ ನನ್ನ ಸೂರ್ಯನೇ
ನಿನ್ನ ಶಾಖ, ನನ್ನ ಮಂಜನಿನ್ನೂ ಕರಗಿಸಿಲ್ಲ
ನಿನ್ನ ಬೆಳಕಿನೊಡನಿನ್ನೂ
ನಾ ಒಂದಾಗಲಿಲ್ಲ,
ಇಂತು ಬೇರ್ಪಟ್ಟ ನಾನು
ನಿನ್ನ ಕೂಡುವಿಕೆಗಾಗಿ
ಮಾಸಗಳ ವರುಷಗಳ ಎಣಿಸುತಿಹೆನು. (80ನೇ ಕವಿತೆ)

ಇಂತಹ ತನ್ನ ಅಸಹಾಯಕತೆಗೆ ಮರುಗಿ ತನಗೆ ತಾನೇ ಹೇಳಿಕೊಳ್ಳುವ ಮಾತನ್ನು ನೋಡಿ —

ಈ ವಿಶ್ವದ ಸಾಮರಸ್ಯದಾನಂದದಲಿ ಒಂದಾಗಿ
ಆನಂದ ತುಂದಿಲನಾಗಿರುವದು ನಿನ್ನಳವಿನಲ್ಲಿಲ್ಲವೆ?
ಈ ಭಯಾನಕದಾನಂದದ ಭೋರ್ಗರೆವ ಸುಳಿಯಲಿ
ಅತ್ತಿತ್ತಲೆಸೆಯಲ್ಪಟ್ಟು ಮುರಿಯಲ್ಪಟ್ಟು
ನಿನ್ನನೇ ನೀ ಕಳಕೊಂಡು
ಆನಂದ ಹೊಂದುವದು ನಿನ್ನಳವಿನಲ್ಲಿಲ್ಲವೆ ? (70ನೇ ಕವಿತೆ)

ನಮ್ಮೆಡೆಗೆ ಬರುವ ನಿರಾಶೆಗಳು, ನಮ್ಮನ್ನು ದೇವರೆಡೆಗೆ ನಡೆಸುತ್ತಿಹ ದಾರಿದೀಪಗಳು– ಕಾರಣ ಅವುಗಳನ್ನು ಅವರು ಆದರಿಸುತ್ತಾರೆ.

ಎನ್ನಾಶೆಗಳು ನೂರಾರು, ಅವನು ಪೂರೈಸೆಂದು
ಬಲು ದೈನ್ಯದಲಿ ನಿನ್ನ ಬೇಡುತಿಹೆನು.
ಆದರೆ ನೀನು ನಿರ್ದಯತೆಯಿಂದ ತಿರಸ್ಕರಿಸಿ,
ನನ್ನನು ರಕ್ಷಿಸುತ್ತಿರುವೆ.
ಈ ನಿನ್ನ ಕಠಿಣವಾದ ಕರುಣೆ,
ನನ್ನ ಜೀವಿತದುದ್ದಕ್ಕೂ ಹಾಸುಹೊಕ್ಕಾಗಿಹುದು.

ನಾನು ಕೇಳದೇ ನೀನು ಕೊಡುತಿರುವ,
ಆಗಸ, ಬೆಳಕು, ದೇಹ, ಜೀವ; ಮನಸ್ಸು
ಈ ಸರಳ–ಅದ್ಭುತ ಕೊಡುಗೆಗಳ ಸ್ವೀಕರಿಸಲು,
ದಿನ ದಿನವೂ ನನ್ನನು ಸಜ್ಜುಗೊಳಿಸುತಿರುವೆ.
ಅತಿಯಾದ ಆಶೆಗೆ ಬಲಿಯಾಗದಿರುವಂತೆ ರಕ್ಷಿಸುತಿರುವೆ.

ನನ್ನನು ವಿನಾಶದೆಡೆಗೊಯ್ವ
ಆಶೆಗಳ ಯಾವಾಗಲೂ ತಿರಸ್ಕರಿಸಿ,
ನಿನ್ನನು ಪೂರ್ಣ ಒಪ್ಪಿಕೊಳ್ಳುವೊಲು,
ನನ್ನನು ದಿನದಿನವೂ ಅಣಿಗೊಳಿಸುತಿರುವೆ. (14ನೇ ಕವಿತೆ)

ದುಃಖ, ಭಗವಂತನಿಂದ ನಮಗೆ ಬರುವ ಪ್ರೇಮ ಸಂದೇಶ ಎಂದು ಹೀಗೆ ಪ್ರತಿಪಾದಿಸುತ್ತಾರೆ :

ದುಃಖ, ನಿನ್ನ ಬಾಗಿಲನು ತಟ್ಟುತಿಹುದು.
ಕೇಳವಳ ಸಂದೇಶ,
ನಿನ್ನೊಡೆಯನೆಚ್ಚೆತ್ತು, ನಿನಗಾಗಿ ಕಾದಿಹನು.

ಇರುಳಿನಂಧಕಾರವ ದಾಂಟಿ,
ಪ್ರೇಮದಾಣಕೆ ಬಾ, ಎಂದು ಕರೆಯುತಿಹನು. (27ನೇ ಕವಿತೆ)

ತನ್ನ ಕ್ಷುಲ್ಲಕತೆಯನ್ನು ಕಂಡು ತಾನೇ ಮರುಗುವ ರೀತಿಯಾದರೂ ಎಂಥದು!

ಹಟಮಾರಿಯಾಗಿವೆ ಬಂಧನಗಳು
ಆದರೂ, ಅವನು ತೊಡೆಯಲೋಸುಗ
ಉದ್ಯುಕ್ತನಾದೊಡೆ - ನನ್ನ ಎದೆ ನೋಯುವದು.
ಮುಕ್ತಿ ಒಂದೇ ನಾನರಸುತಿಹ ವಸ್ತು
ಆದರೂ, ಅದಕಾಗಿ ಆಶಿಸಲು ನಾಚುತಿರುವೆ.

ನಾ ಬಲ್ಲೆ ನಿನ್ನೊಳಿದೆ ಅಪರಿಮಿತ ಸಂಪತ್ತು
ಮೇಣ್, ನೀನೆನ್ನ ಜೀವದ ಗೆಳೆಯ, ಆದರೂ,
ಹೃದಯವನು ತುಂಬಿರುವ ಚಿಲ್ಲರೆ ಚೂರುಗಳ
ಹೊರಗೆಸೆವ ಮನವಿಲ್ಲ ನನಗೆ.

ನನಗೆ ಹೊದಿಕೆಯಾಗಿಹ ಬಟ್ಟೆ
ಮಣ್ಣಿನ ಬಟ್ಟೆ, ಸಾವಿನ ಬಟ್ಟೆ
ನಾನು ದ್ವೇಷಿಸುವೆನದನು
ಆದರೂ, ಮೋಹದಿಂದ ತೆಕ್ಕೈಸುವೆ

ನನ್ನ ಋಣ ಭಾರ ದೊಡ್ಡದು, ಸೋಲುಗಳು ಅಸಂಖ್ಯ
ನಾಚಿಕೆಯು ಗೌಪ್ಯ ಮೇಣ್ ಭಾರ, ಆದರೂ,
ನನ್ನೊಳಿತಿಗಾಗಿ ನಿನ್ನಡಿಗೆ ಬಂದಾಗ
ನನ್ನ ಬೇಡಿಕೆಗಳನು, ನೀ ಪೂರೈಸಬಹುದೆಂಬ
ಭಯದಿಂದ ನಡುಗುವೆನು. (28ನೇ ಕವಿತೆ)

'ನನ್ನೊಳತಿಗಾಗಿ ನಿನ್ನಡಿಗೆ ಬಂದಾಗ

........................ನಡುಗುವೆನು'' ಎನ್ನುವಲ್ಲಿ ಎಂತಹ ಗೂಢ ಭಾವನೆಯನ್ನು ರವೀಂದ್ರರು ಹೊರಗೆಡಹಿದ್ದಾರೆ ಎಂಬುದನ್ನು ಗಮನಿಸ ಬೇಕು.

ಆತ್ಮದ ಮತ್ತು ಈ ವ್ಯೋಮದ ಅನಂತತೆಯನ್ನು ಮರೆತು ಸತ್ಯದ ಪಥವನ್ನು ಎಲ್ಲರೂ ಉಪೇಕ್ಷಿಸುವವರೆ. ರವೀಂದ್ರರೂ ಎಲ್ಲರಂತೆಯೇ, ಆ ದಾರಿಯನ್ನು ಉಪೇಕ್ಷಿಸಿದ್ದವರೇ. ಆದರೆ ಸಾವಿನ ನೆನಪು, ಬೆಳಕನ್ನು ಚೆಲ್ಲಿ ಇವರ ಕಣ್ತೆರೆಸಿ, ತನ್ನ ಅಹಮು ಕ್ಷುಲ್ಲಕ, ಇರುವು ಕ್ಷಣಿಕ, ಎಂಬುದನ್ನು ಮನಗಾಣಿಸಿ, ನಿಜದ ಹಾದಿಯನ್ನು ಇವರು ತಪ್ಪದಂತೆ ಮಾಡಿದೆ ಎನ್ನುವ ಅದ್ಭುತ, ಸುಂದರ, ಅಭಿವ್ಯಕ್ತಿ ಈ ಕೆಳಗಿನ ಪದ್ಯದಲ್ಲಿದೆ —

ನಾ ಬಲ್ಲೆ ದಿನವೊಮ್ಮೆ
ನನ್ನ ಕಂಗಳ ಮುಂದೆ ಕೊನೆ ಪರದೆ ಜಾರುವದು,
ಈ ಬುವಿಯ ನೋಟ ಶಾಶ್ವತದಿ ಮರೆಮಾಚಿ
ಜೀವ ಮೌನದಲಿ ನಿರ್ಗಮಿಸುವದು.

ಆದರೂ ಎಂದಿನೊಲು ಮುಂದುವರೆವವು
ಸೂರ್ಯೋದಯಾಸ್ತಮಾನ
ಮೇಣ್ ನಿಶೆಯ ನಕ್ಷತ್ರ ಕಾವಲು.
ನೋವು ನಲಿವುಗಳ ಹೊತ್ತ ಘಳಿಗೆ ಘಳಿಗೆಗಳು
ನಿಡಿಸುಯ್ಯುತ್ತ ನಡೆವವು ಅಂಬುಧಿಯ ತೆರೆಗಳೊಲು.

ನನ್ನ ಜೀವನದ ಕೊನೆಯ ಕ್ಷಣಗಳನು ನೆನೆದಾಗ,
ಈ ಕ್ಷಣದ ಅಡೆತಡೆಯ
ಗೋಡೆಗಳೊಡೆಯುವವು.
ಸಾವು ಚೆಲ್ಲುವ ಬೆಳಕಿನಡಿಯಲ್ಲಿ

ಕಣ್ಣು ಕೋರೈಸುವದು
ಎಲ್ಲರುಪೇಕ್ಷಿಸಿದ ಜಗದ ಸಂಪತ್ತು
ಯಾವುದುನ್ನತವಿಲ್ಲಿ? ಕೀಳಾವುದು?

ಸ್ವಾರ್ಥಕ್ಕೆ ಗಳಿಸಿದ ವ್ಯರ್ಥದಲಿ ಹಲುಬಿದ
ಅರ್ಥವಿಲ್ಲದ ವಸ್ತುಗಳು ಮರೆತು ಬಿಡಲೀಗ.
ಜಾರಿ ಹೋಗುವ ನಿಜದ ಅಲೆಗಾಗಿ, ನೆಲೆಗಾಗಿ
ತವಕಿಸುವೆನೀಗ.
ಈ ತನಕ ನಿರ್ಲಕ್ಷಿಸಿದ, ನಿಜದೆಳೆಗಳನು
ಹಿಡಿದುಕೊಳ್ಳುವೆನೀಗ. (92ನೇ ಕವಿತೆ)

ತನ್ನ ಇರುವು ಅನಂತದ ಇರುವಿಗೆ ಹೊಂದಿಕೊಂಡಿರಬೇಕು ಮತ್ತು ಅಂತಹ ಇರುವಿಕೆಯನ್ನು, ತಡಮಾಡದೇ ಮೈಗೂಡಿಸಿಕೊಂಡು ಕೊನೆಯುಸಿರವರೆಗೆ ಬದುಕಬೇಕು, ಎನ್ನುವ ಛಲವನ್ನು ತಂತಿವಾದ್ಯದ, ಸಂಗೀತದ, ಸಂಗೀತದುಂಬಿದ ದಿವ್ಯ ಮಂದಿರದ, ಪ್ರತಿಮೆಗಳಿಂದ ಅಭಿವ್ಯಕ್ತಿಸಿದ ಕಾವ್ಯಕಲೆಯನ್ನು ಮತ್ತು ಅದರಲ್ಲಿರುವ ಭಾವದ ತೀವ್ರತೆಯನ್ನು ನೋಡಿ–

ಅಚ್ಯುತ ಅರೂಪವಾದ ಮುತ್ತನು ಪಡೆವಾಶೆಯಲಿ
ರೂಪಗಳ ಸಾಗರದ ಆಳಕ್ಕೆ ಇಳಿಯುವೆ.

ಗಾಳಿಗೊಡೆವ ಈ ನೌಕೆಯಲಿ ಇನ್ನು
ದಡದಿಂದ ದಡಕೆ ತೇಲಲಾರೆ.
ತೆರೆಗಳ ತುದಿಯ ಮೇಲೆ ಆಟವಾಡುವ
ದಿನಗಳುಳಿದಿಲ್ಲವೀಗ.

ಸಾವಿಲ್ಲದ ಬದುಕಿಗಾಗಿ
ಸಾವ ತವಕ ನನಗೀಗ.

ನನ್ನ ಜೀವದ ತಂತಿವಾದ್ಯವನು
ಅಂತ್ಯವಿಲ್ಲದ ಆಳದ ಸಂಗೀತದುಂಬಿದ
ದಿವ್ಯ ಮಂದಿರಕ್ಕೊಯ್ಯುವೆನು, ಮೇಣ್
ಅನಂತದ ಶೃತಿಗೆ ಈ ವಾದ್ಯದ ಶೃತಿಯ
ಮೇಳೈಸಿ ನುಡಿಸುವೆನು. ಇದರ
ಕೊನೆಯ ಸ್ವರ ನುಡಿದು
ವಾದ್ಯ ಮೌನವಾದೊಡನೆ
ನಿಶ್ಯಬ್ಧದ ಅಡಿಗಳಿಗೆ ಅರ್ಪಿಸುವೆನಿದನು. (100ನೇ ಕವಿತೆ)

ರವೀಂದ್ರರು ಈ ಕವಿತೆಗಳನ್ನು ಬರೆದಿದ್ದಾದರೂ ಹೇಗೆ? ಅವರು ಪ್ರಯತ್ನಿಸಿ ಬರೆಯಲಿಲ್ಲ, ದೇವರೇ ಅವರ ಎದೆಯೊಳಗೆ ಕುಳಿತು ತಾನೇ ಅವರ (ರವೀಂದ್ರರ) ನಾಲಗೆಯಿಂದ ನುಡಿಯುವವರೆಗೆ ಅವರು, ರವಿಯ ಉದಯಕೆ ರಾತ್ರಿಯು ಕಾಯುವಂತೆ – ಸಂಯಮದಿಂದ ಕಾಯುತ್ತಿದ್ದರು. ಅರುಣೋದಯವಾದಾಗ ಹಕ್ಕಿಗಳು ಹಾಡುತ್ತ ಹಾರತೊಡಗುವಂತೆ, ಅವರ ಹಾಡುಗಳು ಹೃದಯ ಕಾನನದೊಳಗಿಂದ ಹೊರಹೊಮ್ಮಿ ಬಂದವು.

ನೀನುಲಿಯಲೊಲ್ಲದಿರೆ,
ನಿನ್ನ ಮೌನವನೆ ಎದೆಯೊಳಗೆ ತುಂಬಿಟ್ಟುಕೊಂಡು
ಸಹಿಸಿಕೊಳುವೆ. ಮೊಗವ ತಗ್ಗಿಸಿ,
ತೀಕ್ಷ್ಣ ದೃಷ್ಟಿಯಲಿ ಅವಲೋಕಿಸುವ
ಗಾಡಾಂಧಕಾರದ ಸ್ಥಬ್ದ ರಾತ್ರಿಯೊಲು, ಸಂಯಮದಿಂದಿರುವೆ.

ಬೆಳಗು ಬಂದೇಬಹುದು, ಕತ್ತಲಳಿಯದೆ ಇರದು
ಆಗಸವು ಒಡೆದು,
ಬಂಗಾರದ ಕಿರಣಗಳೋಪಾದಿಯಲಿ
ಸುರಿಯ ತೊಡಗುವದು
ನಿನ್ನೊಲವಿನುಲಿಯ ಅಮೃತಧಾರೆ.

ಆಗ –
ನನ್ನೆದೆಯೊಳಗಿನ ಪ್ರತಿಯೊಂದು ಗೂಡಿನಿಂದ
ನಿನ್ನ ಮಾತುಗಳು,
ಹಾಡಿನ ಹಕ್ಕಿಗಳಾಗಿ ಹಾರ ತೊಡಗುವವು.
ಎನ್ನದೆಗಾಡಿನ ಮರಗಳ ಗುಂಪುಗಳೊಳಗಿಂದ
ನಿನ್ನ ರಾಗಗಳು,
ಹೊರಹೊಮ್ಮ ತೊಡಗುವವು. (19ನೇ ಕವಿತೆ)

ಬುವಿಯ ಕತ್ತಲೆಯನ್ನು ಸೀಳಿ, ಬೆಳಕನೊದಗಿಸಲು ರವಿ ಉದಯಿಸುವಂತೆ, ಮನುಕುಲದ ಮನದ ಕತ್ತಲೆಯನ್ನು ದೂರಮಾಡಲು ರವೀಂದ್ರರ ಕವಿತೆಗಳು ಹುಟ್ಟಿಬಂದಿಹವೆ?

ರವೀಂದ್ರರ ಈ ಹಾಡುಗಳಾದರೂ ಎಂಥವು? ಅವು ಯಾವಾಗಲೂ ಇದ್ದಿರುವ ಸತ್ಯಗಳು. ಅವು ಪದ್ಯ ರೂಪೀ ಹಾಡುಗಳಲ್ಲ, ಅವು ಬಹಳಷ್ಟು ಮಟ್ಟಿಗೆ ಗದ್ಯವೇ. ಆದರೆ ಅವು ಅಲಂಕಾರದ ಕಲಬೆರಿಕೆ ಇರದ, ದೇವ ರೊಡನೆ ಸಂಗಮಕ್ಕೆ ಯಾವ ತಡೆಯನ್ನು ಉಂಟುಮಾಡದ ಪರಿಪೂರ್ಣ ಪವಿತ್ರ ಭಾವನೆಗಳು.

ನನ್ನ ಹಾಡು
ಅಲಂಕಾರಗಳನೆಲ್ಲ ಕಳಚಿಹುದು.
ಆಕೆಗಿಲ್ಲ, ಬೆಡಗಿನುಡಿಗೆಯ ಜಂಭ,
ಒಡವೆಗಳು ನಮ್ಮ ಸಂಗಮಕೆ
ತಡೆಯನೊಡ್ಡುವವು ಒಡೆಯ.
ಅವುಗಳ ಝುಣಝುಣದೊಳು
ನಿನ್ನ ಪಿಸುಮಾತುಗಳು, ಮುಳುಗಿ ಹೋಗುವವು

(7ನೇ ಕವಿತೆ)

"ಮುಕ್ತಿ ನನಗೆ ತ್ಯಾಗದೊಳಗಿಲ್ಲ
ಸಾವಿರಾರು ಆನಂದದ ಬಂಧನಗಳಲಿ
ಮುಕ್ತಿಯ ಅಪ್ಪುಗೆಯನು ಅನುಭವಿಸುತಿಹೆನು" (73ನೇ ಕವಿತೆ)

ಎನ್ನುತ್ತ ಬದುಕನ್ನು ಅಪ್ಪುವ,

ಈ ಜಗದ ಜಾತ್ರೆಗೆ ಆಮಂತ್ರಣ ದೊರೆತು,
ನಾನು ಧನ್ಯನಾದೆ. (16ನೇ ಕವಿತೆ)

ಎಂದು ಈ ಜೀವನವನ್ನು ಪ್ರೀತಿಸುವ ರವೀಂದ್ರರು, ಸಾವೂ ಜೀವನದಿಂದ ಬೇರೆಯಲ್ಲ, ಸಾವು ಜೀವನಗಳೆರಡೂ ಸೇರಿಯೇ ನಮಗೊಬ್ಬ ತಾಯಿ, ಕಾರಣ ಸಾವನ್ನೂ ಜೀವನದಷ್ಟೇ ಪ್ರೀತಿಸಬೇಕು ಎಂದು ಹೇಳುವ ರೀತಿ ಏನದ್ಭುತ!

ಈ ಜೀವನವ ನಾ ಪ್ರೀತಿಸುವೆನದರಿಂದ
ಸಾವನೂ ಪ್ರೀತಿಸಬೇಕೆಂಬುದನು ಬಲ್ಲೆ ನಾನು.

ತಾಯಿ, ತನ್ನ ಬಲ ಮೊಲೆಯ ಕಸಿದುಕೊಂಡಾಗ
ಅಳುವದು ಮಗು, ಆದರೆ,
ಮರು ಚಣವೆ, ಎಡ ಮೊಲೆಯಲಿ
ಸಾಂತ್ವನವ ಪಡೆಯುವದು. (95ನೇ ಕವಿತೆ)

ಗೀತಾಂಜಲಿಯ ಕವಿತೆಗಳಲ್ಲಿ ನಿಗೂಢತೆಯು ತುಂಬಿ ತುಳುಕುತ್ತಿಹುದು. ಎಲ್ಲ ಕವಿತೆಗಳ ಬಗ್ಗೆ ಇಲ್ಲಿ ಪ್ರಸ್ತಾಪಿಸುವದು ಶಕ್ಯವಿಲ್ಲ, ಪ್ರಸ್ತಾಪಿಸಿದರೂ ಅವುಗಳ ಅರ್ಥವನ್ನು ವಿವರಿಸುವದು ಅಶಕ್ಯವಾದ ಮಾತು. ಈ ಕವಿತೆಗಳ ಬಗ್ಗೆ ರವೀಂದ್ರರೇ ಈ ರೀತಿ ಹೇಳುತ್ತಾರೆ.

ನಾ ಹೆಣೆದ ನಿನ್ನ ಕಥೆಗಳನು
ಸ್ಥಿರವಾಗಿ ನಿಲ್ಲುವ ಹಾಡುಗಳನಾಗಿಸಿಹೆ.

ನಿಗೂಢತೆಯು ಎನ್ನ ಹೃದಯದಿಂದ
ಹೊರಚಿಮ್ಮುತಿಹುದು.
ನನ್ನೆಡೆಗೆ ಬಂದು ಕೇಳ್ವರವರು –
''ನಿನ್ನ ಬರಹಗಳೆಲ್ಲವುಗಳ
ಅರ್ಥವನು ಹೇಳೆಮಗೆ''
ಉತ್ತರಿಸಲರಿಯದೆ,
''ಆಹ್ ಅವುಗಳ ಅರ್ಥಗಳನಾರು ಬಲ್ಲರು?'' ಎಂಬೆ.
ಅಪಹಾಸದ ನಗೆನಕ್ಕು
ಹೊರಟು ಹೋಗುವರವರು
ನೀನು ಮುಗುಳ್ನಗುತ ಅಲ್ಲಿಯೇ ಕುಳಿತಿರುವೆ. (102ನೇ ಕವಿತೆ)

ಡಬ್ಲ್ಯು.ಬಿ. ಏಟ್ಸ್ ಬರೆಯುತ್ತಾರೆ

''ಗೀತಾಂಜಲಿಯ ಹಸ್ತಪ್ರತಿಯನ್ನು ನಾನು
ದಿನಗಟ್ಟಲೇ ನನ್ನೊಡನೆ ಹೊತ್ತುಕೊಂಡು,
ರೈಲುಗಳಲ್ಲಿ, ಬಸ್ಸುಗಳಲ್ಲಿ, ರೆಸ್ಟೋರೆಂಟ್‌ಗಳಲ್ಲಿ
ಕವಿತೆಗಳನ್ನು ಓದುತ್ತಾ ತಿರುಗಾಡಿದೆ.....'' (ಪೀಠಿಕೆ ಪುಟ xxxi)

ಇಂತಹ ಅನುಭವ ನನಗೂ ಆಗಿದೆ. ನಾನು ಮೊದಲು ಗೀತಾಂಜಲಿಯನ್ನು ಓದಿದ್ದು 1974ರಲ್ಲಿ. ಅಂದಿನಿಂದ ಆಗಾಗ್ಗೆ ನಾನು ಇದನ್ನು ಓದುತ್ತಲೇ ಇದ್ದೇನೆ. ಇದು ಏಕಿಷ್ಟು ನನ್ನ ಮೇಲೆ ಪ್ರಭಾವ ಬೀರಿದೆ ಎಂದು ಹೇಳುವದು ನನಗೆ ಶಕ್ಯವಿಲ್ಲ. ನನ್ನ ಇಂಗ್ಲೀಷ್ ಗುರುಗಳಾದ ಶ್ರೀ ಚಂಪಾಸರ್‌ರವರು 'ಮುನ್ನುಡಿ'ಯಲ್ಲಿ ನನ್ನ ಈ 'ಗೀತಾಂಜಲಿ'ಯ ಗುಂಗಿಗೆ ನನ್ನ ಮನದಲ್ಲಿ ಅಪ್ರಜ್ಞಾಪೂರ್ವಕವಾಗಿ ಕೆಲಸ ಮಾಡುವ ಕೆಲವು ಪರಿಕಲ್ಪನೆಗಳು ಅಥವಾ 'ದರ್ಶನ' ಎಂದು ಹೇಳಿದ್ದಾರೆ. ಆದರೆ ಈ ಪರಿಕಲ್ಪನೆಗಳೇನು, ನನ್ನ ದರ್ಶನಗಳೇನು ಎಂದು ನನಗೇ ಸ್ಪಷ್ಟವಾಗಿ ತಿಳಿದಿಲ್ಲ. ಆದರೆ ಒಂದು ಮಾತು

ಹೇಳಬಯಸುತ್ತೇನೆ. ನಾನು ಶಿರಡಿಯ ಶ್ರೀ ಸಾಯಿಬಾಬರವರ ಭಕ್ತನಾಗಿ ಆತ್ಮನಿವೇದನೆಯನ್ನು ಅಭ್ಯಾಸಮಾಡುತ್ತ ಬಂದಂತೆಲ್ಲ ಗೀತಾಂಜಲಿಯಲ್ಲಿನ ಕವಿತೆಗಳ ಅರ್ಥ ಹೆಚ್ಚು ಸ್ಪಷ್ಟವಾಗುತ್ತ ಬಂದಿದೆ.

ಇಲ್ಲಿನ ಎಷ್ಟೋ ಕವಿತೆಗಳು, ಬಹುಕಾಲದಿಂದ ಮನನ ಮಾಡಿದ್ದರಿಂದ, ನಿರಾಯಾಸವಾಗಿ ಕನ್ನಡದ ನುಡಿಗಳಲ್ಲಿ ನನ್ನ ಮನಸ್ಸಿನಲ್ಲಿ ಮೂಡಿಬಂದವು. ಆದ್ದರಿಂದ ಎಲ್ಲ 103 ಕವಿತೆಗಳನ್ನು ತರ್ಜುಮೆ ಮಾಡಿ ಬಿಡುವ ಹಂಬಲ ಹುಟ್ಟಿ ಕೊನೆಗೆ ಈ ಕೃತಿಯು ರೂಪ ತಳೆದಿದೆ. ಡಬ್ಲ್ಯು.ಬಿ. ಏಟ್ಸರವರ ಪೀಠಿಕೆಯೂ ಒಂದು ಮಹತ್ವವನ್ನು ಹೊಂದಿದೆ ಮತ್ತು 'ಗೀತಾಂಜಲಿ'ಯನ್ನು ಅರ್ಥೈಸಿಕೊಳ್ಳಲು ಅದು ಬಹಳಷ್ಟು ಸಹಾಯಕ ವಾಗುತ್ತದೆ ಎಂದು ಭಾವಿಸಿ ಅದನ್ನೂ ಕನ್ನಡಕ್ಕೆ ತರ್ಜುಮೆಗೊಳಿಸಿ ಇದರೊಟ್ಟಿಗೇ ಪ್ರಕಟಿಸಿದ್ದಾನೆ.

ಗೀತಾಂಜಲಿಯ ಕವಿತೆಗಳನ್ನು ಓದಬೇಕು. ಮನನ ಮಾಡಬೇಕು. ಅವುಗಳ ಅರ್ಥ ಹೊಳೆಯಲೆಂದು ದೇವರಲ್ಲಿ ಪ್ರಾರ್ಥಿಸಬೇಕು ಎಂದು ನನ್ನ ಭಾವನೆ. ಡಬ್ಲ್ಯು.ಬಿ. ಏಟ್ಸರವರ ಶಬ್ದಗಳಲ್ಲಿ ಹೇಳಬೇಕೆಂದರೆ

''ಈ ಕವಿತೆಗಳು ಸಣ್ಣ ಸುಂದರ ಪುಸ್ತಕಗಳಲ್ಲಿ ಮುದ್ರಣಗೊಂಡು, ಜೀವನವನ್ನು ಅರಿತುಕೊಳ್ಳುವ ಮೊದಲೇ, ಬದುಕಿನ ಬಗ್ಗೆ ಅರ್ಥವಿಲ್ಲದ ನಿಟ್ಟುಸಿರನ್ನು ಬಿಡುತ್ತಾ ತಮ್ಮ ಆಲಸ್ಯ ತುಂಬಿದ ಕೈಗಳಿಂದ ಪುಟಗಳನ್ನು ತಿರಿವಿ ಹಾಕುವಂತಹ ಮಹಿಳೆಯರ ಮೇಜಿನ ಮೇಲೆ ಬಿದ್ದುಕೊಂಡಿರಲು ಅಲ್ಲ, ಅಥವಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ತಮ್ಮ ಕೈಯಲ್ಲಿ ಈ ಪುಸ್ತಕವನ್ನು ಹಿಡಿದು ಕೊಂಡು, ನಿಜವಾಗಿ ಅವರ ಜೀವನದ ಹೋರಾಟ ಪ್ರಾರಂಭವಾಗುವ ವೇಳೆಗೆ, ಅದನ್ನು ಆ ಕಡೆ ಇಟ್ಟು ಬಿಡಲಿಕ್ಕಲ್ಲ, ಆದರೆ, ತಲೆಮಾರುಗಳು ಕಳೆದಂತೆ, ಈ ಕವಿತೆಗಳನ್ನು ಹಾದಿಬದಿಯಲ್ಲಿ ನಡೆದಾಡುವ ಜನರು ಹಾಗೂ ನದಿಗಳ ಮೇಲೆ ದೋಣಿಗಳಲ್ಲಿ ತೇಲುತ್ತಿರುವ ಪಯಣಿಗರು ಹಾಡುತ್ತ ಸಾಗುತ್ತಾರೆ''. (ಪೀಠಿಕೆ ಪುಟ xxxii)

ಒಮ್ಮೊಮ್ಮೆ ಭಾವವನ್ನು ಸರಿಯಾಗಿ ಅಭಿವ್ಯಕ್ತಿಸಲು, ಒಮ್ಮೊಮ್ಮೆ ತಾಳಬದ್ಧತೆ *(Rhythm)* ಗಾಗಿ, ರವೀಂದ್ರರು ಬಳಸದ ಶಬ್ದಗಳನ್ನು ಬಳಸಿದ್ದೇನೆ. ಆದರೆ ನನ್ನ ಶಕ್ತ್ಯಾನುಸಾರ, ಇಂಗ್ಲೀಷ್‌ನಲ್ಲಿರುವ ಕವಿತೆಗಳ ಭಾವಕ್ಕೆ ಏನೂ ಧಕ್ಕೆಯಾಗದಂತೆ ಅನುವಾದಿಸಲು ಪ್ರಯತ್ನಿಸಿದ್ದೇನೆ. ಈ ಕೃತಿಯನ್ನು ಹೇಗೆ ಸ್ವೀಕರಿಸಬೇಕೋ, ಓದುಗರಿಗೇ ಬಿಟ್ಟಿದ್ದು.

ಮುನ್ನುಡಿ ಬರೆದು ಕೆಲ ತಿದ್ದುಪಡಿಗಳನ್ನು ಮಾಡಿ ನನ್ನನ್ನು ಪ್ರೋತ್ಸಾಹಿಸಿದ ಶ್ರೀ ಚಂಪಾ ಸರ್‌ರವರಿಗೆ ನಾನು ಋಣಿ. ನಮ್ಮೂರವರೇ ಆದ ಮತ್ತು ಲಲಿತ ಪ್ರಬಂಧಗಳ ಬರಹಗಾರರೆಂದು ಆಗಲೇ ಹೆಸರುಗಳಿಸಿರುವ ಶ್ರೀ ಈರಪ್ಪ ಎಂ. ಕಂಬಳಿಯವರ ಸೂಕ್ತ ಸಲಹೆಗಳನ್ನು ನೀಡಿದ್ದಾರೆ. ರಕ್ಷಾಪುಟಕ್ಕೆ ಸುಂದರವಾದ ಚಿತ್ರಗಳನ್ನು ಬಿಡಿಸಿಕೊಟ್ಟ ಶ್ರೀ ಶರಣಪ್ಪ ಹಡೇದ, ಚಿತ್ರ ಆರ್ಟ್ ಪ್ರಿಂಟರ್ರ್ಸ್‌ನ ಶ್ರೀ ಕೆ. ಚಿಕ್ಕಣ್ಣ ಮತ್ತು ಸಿಬ್ಬಂದಿ ವರ್ಗ, ಪುಸ್ತಕ ಮಾಡುವಲ್ಲಿ ವಿಶೇಷ ಮುತುವರ್ಜಿವಹಿಸಿದ ಶ್ರೀ ಮುರುಗೇಂದ್ರಪ್ಪ - ಈ ಕೃತಿಯು ಸುಂದರವಾಗಿ ಹೊರ ಬರಲು ಕಾರಣರಾಗಿದ್ದಾರೆ. ಇವರೆಲ್ಲರಿಗೂ ನಾನು ಆಭಾರಿ.

2ನೇ ಅಕ್ಟೋಬರ್ 2003 —ಮಹಿಪಾಲ ದೇಸಾಯಿ

# ಪೀಠಿಕೆ

ಕೆಲ ದಿನಗಳ ಹಿಂದೆ ಒಬ್ಬ ಪ್ರಖ್ಯಾತ ಬಂಗಾಳಿ ವೈದ್ಯನಿಗೆ ನಾನೆಂದೆ "ನನಗೆ ಜರ್ಮನ್ ಭಾಷೆ ಬರುವದಿಲ್ಲ, ಆದರೂ ಇಂಗ್ಲೀಷಿಗೆ ತರ್ಜುಮೆಗೊಂಡ ಒಂದು ಜರ್ಮನ್ ಕವಿತೆ ನನ್ನ ಹೃದಯವನ್ನು ತಟ್ಟಿದರೆ ಬ್ರಿಟಿಷ್ ಮ್ಯೂಜಿಯಂಗೆ ಹೋಗಿ, ಅಲ್ಲಿ ಆ ಜರ್ಮನ್ ಕವಿಯ ಜೀವನದ ಬಗ್ಗೆ ಹಾಗೂ ಆತನ ವಿಚಾರದ ಹಿಂದಿರುವ ಇತಿಹಾಸದ ಬಗ್ಗೆ ಇಂಗ್ಲೀಷ್ ಭಾಷೆಯಲ್ಲಿರುವ ಸಾಹಿತ್ಯವನ್ನು ಹುಡುಕುವೆ. ಆದರೆ, ರವೀಂದ್ರನಾಥ ಠಾಕೂರರ ಇಂಗ್ಲೀಷಿಗೆ ತರ್ಜುಮೆಗೊಂಡ ಈ ಕವಿತೆಗಳು, ಹಿಂದೆಂದೂ, ಯಾವದೇ ಸಾಹಿತ್ಯವು ಕದಲಿಸದಷ್ಟು ನನ್ನ ಹೃದಯವನ್ನು ಕಲಕಿದ್ದರೂ ಒಬ್ಬ ಭಾರತೀಯನು ನನಗೆ ತಿಳಿಸದ ವಿನಹ ಠಾಕೂರರ ಜೀವನ ಮತ್ತು ಇಂಥ ಕವಿತೆಗಳನ್ನು ಹೊರತಂದ ಅವರ ವಿಚಾರಲಹರಿಯನ್ನು ತಿಳಿದುಕೊಳ್ಳುವದು ಶಕ್ಯವಿಲ್ಲ".

ಠಾಕೂರರ ಕವಿತೆಗಳು ನನ್ನನ್ನು ಇಷ್ಟೊಂದು ಕದಲಸಿದ್ದು ಆತನಿಗೆ ಸಹಜವಾಗಿ ಕಂಡಿತು. ಆತನೆಂದ "ನಾನು ರವೀಂದ್ರನಾಥರ ಒಂದಿಲ್ಲೊಂದು ಕೃತಿಯನ್ನು ಪ್ರತಿದಿನ ಓದುತ್ತೇನೆ. ಅವರು ಬರೆದ ಒಂದೇ ಒಂದು ವಾಕ್ಯವೇ ಈ ಜಗತ್ತಿನ ಎಲ್ಲ ಕಷ್ಟಗಳನ್ನು ಮರೆಸಲು ಸಾಕು." ನಾನೆಂದೆ – "ಎರಡನೆಯ ರಿಚರ್ಡ್ ದೊರೆಯ ಆಳ್ವಿಕೆಯಲ್ಲಿ ಲಂಡನ್ನಿನಲ್ಲಿರುವ ಒಬ್ಬ ಆಂಗ್ಲ ವ್ಯಕ್ತಿಗೆ ಪೆಟ್ರಾರ್ಚ ಅಥವಾ ಡಾಂಟೆಯ ಕೃತಿಗಳ ಇಂಗ್ಲೀಷ್ ತರ್ಜುಮೆಗಳನ್ನು ತೋರಿಸಿದರೆ, ಆತನಲ್ಲಿ ಉದ್ಭವಿಸುವ ಪ್ರಶ್ನೆಗಳಿಗೆ ಉತ್ತರಿಸಲು ಯಾವ ಪುಸ್ತಕಗಳೂ ದೊರಕುತ್ತಿರಲಿಕ್ಕಿಲ್ಲ. ಆದರೆ, ಆತ ತನ್ನ ಪ್ರಶ್ನೆಗಳನ್ನು, ನಾನು ಈಗ ನಿಮ್ಮ ಮುಂದಿಡುತ್ತಿದ್ದಂತೆ, ಒಬ್ಬ ಫ್ಲೋರೆಂಟೈನ್ ಬ್ಯಾಂಕರ್‌ನ ಅಥವಾ ಒಬ್ಬ ಲೋಂಬಾರ್ಡ್ ವ್ಯಾಪಾರಿಯ ಮುಂದಿಡುತ್ತಿದ್ದ. ಒಟ್ಟಿನಲ್ಲಿ ನನ್ನ ಅನಿಸಿಕೆಯೇನೆಂದರೆ, ಈ ಕವಿತೆಗಳು ಎಷ್ಟೊಂದು ಸರಳ ಮತ್ತು ಸಮೃದ್ಧ! ಒಂದು ಹೊಸ ಪುನರುಜ್ಜೀವನಕಾಲ (Renaissance) ನಿಮ್ಮ ದೇಶದಲ್ಲಿ

ಉದಯಿಸಿಹುದು. ಯಾರದಾದರೂ ಹೇಳಿಕೆಯಿಂದಲ್ಲದೇ ನನಗೆ ಈ ಸಂಗತಿಯೇ ತಿಳಿಯುತ್ತಿರಲಿಲ್ಲ.

ಆತ ಹೇಳಿದ "ನಮ್ಮಲ್ಲಿ ಬೇರೆ ಕವಿಗಳಿದ್ದಾರೆ, ಆದರೆ ಅವರು ರವೀಂದ್ರನಾಥರ ಸಮನಲ್ಲ. ನಾವು ಇದನ್ನು ರವೀಂದ್ರನಾಥ ಯುಗಾರಂಭ ಎಂದು ಕರೆಯುತ್ತೇವೆ. ನಮ್ಮಲ್ಲಿ ರವೀಂದ್ರನಾಥರು ಪಡೆದಿರುವಷ್ಟು ಪ್ರಸಿದ್ಧಿಯನ್ನು ಯೂರೋಪಿನಲ್ಲಿ ಪಡೆದುಕೊಂಡಿರುವ ಕವಿ ಇಲ್ಲವೆಂದು ನನ್ನ ಅನಿಸಿಕೆ. ಅವರು ಕಾವ್ಯರಚನೆಯಲ್ಲಿರುವಷ್ಟೇ ಸಂಗೀತದಲ್ಲಿಯೂ ಪರಿಣಿತರು. ಅವರ ಹಾಡುಗಳು, ಪಶ್ಚಿಮ ಭಾರತದಿಂದ ಬಂಗಾಳಿ ಭಾಷೆ ಪ್ರಚಲಿತವಿರುವ ಬರ್ಮಾದಲ್ಲಿ ಹಾಡಲ್ಪಡುತ್ತಿವೆ. ಅವರು 19 ವರ್ಷದವರಿದ್ದಾಗಲೇ ಪ್ರಸಿದ್ಧಿಗೆ ಬಂದಿದ್ದರು ಮತ್ತು ಆಗಲೇ ತಮ್ಮ ಮೊದಲ ಕಾದಂಬರಿಯನ್ನು ಬರೆದರು. 19 ವರ್ಷಕ್ಕಿಂತ ಸ್ವಲ್ಪ ದೊಡ್ಡವರಾದ ಮೇಲೆ ಅವರು ಬರೆದ ನಾಟಕಗಳು ಕಲ್ಕತ್ತೆಯಲ್ಲಿ ಇನ್ನೂ ಆಡಲ್ಪಡುತ್ತಿವೆ. ಅವರು ಜೀವಿಸಿದ ಪರಿಪೂರ್ಣವಾದ ಜೀವನವನ್ನು ನಾನು ಅತೀ ಮೆಚ್ಚಿಕೊಳ್ಳುತ್ತೇನೆ. ಅವರು ತರುಣರಿದ್ದಾಗ ಹೆಚ್ಚಾಗಿ ನೈಜ ವಸ್ತುಸ್ಥಿತಿಗಳ ಬಗ್ಗೆ ಬರೆದರು. ತಮ್ಮ 25 ವರ್ಷದಿಂದ 35 ವರ್ಷಗಳವರೆಗೆ ತಮ್ಮ ತೋಟದಲ್ಲಿ ಇಡೀ ದಿನ ಕುಳಿತಿರುತ್ತಿದ್ದರು ಮತ್ತು ಬಹುಶಃ ಅವರ ಮನಸ್ಸನ್ನು ದುಃಖವಾವರಿಸಿದಾಗ ಅವರು ಅತ್ಯಂತ ಸುಂದರವಾದ ಪ್ರೇಮ ಕವಿತೆಗಳನ್ನು ನಮ್ಮ ಭಾಷೆಯಲ್ಲಿ (ಬಂಗಾಳಿಯಲ್ಲಿ) ಬರೆದಿದ್ದಾರೆ."

ಆತ ಭಾವೋದ್ವೇಗದಿಂದ ಮುಂದುವರೆದ "ನಾನು ಹದಿನೇಳು ವರ್ಷದವನಿದ್ದಾಗ ಅವರ ಪ್ರೇಮಕವಿತೆಗಳಿಗೆ ಎಷ್ಟು ಚಿರ ಋಣಿಯಾಗಿದ್ದೆನೆಂಬುದನ್ನು ಶಬ್ದಗಳಲ್ಲಿ ಹೇಳಲು ಶಕ್ಯವಿಲ್ಲ. ತದನಂತರ ಅವರ ಕಲೆ ಆಳವಾಗುತ್ತ ಹೋಯಿತು. ಧಾರ್ಮಿಕ ಮತ್ತು ತಾತ್ವಿಕವಾಗುತ್ತ ಮುನ್ನಡೆಯಿತು. ಮನುಕುಲದ ಎಲ್ಲ ಬಯಕೆಗಳು ಅವರ ಕವಿತೆಗಳಲ್ಲಿವೆ. ಜೀವಿಸಲು ಒಲ್ಲೆನೆನ್ನದೇ, ಈ ಬದುಕಿನೊಳಗಿಂದಲೇ ಮಾತನಾಡಿದ ನಮ್ಮ ಸಂತರುಗಳಲ್ಲಿ ಮೊದಲಿಗನೀತ. ಈ ಕಾರಣದಿಂದಲೇ ಅವರನ್ನು ನಾವು ಅಷ್ಟೊಂದು ಪ್ರೀತಿಸುತ್ತೇವೆ."

. ಆ ವೈದ್ಯನುಸುರಿದ ಶಬ್ದಗಳನ್ನೇ ನಾನು ಇಲ್ಲಿ ಹೇಳಿರಲಿಕ್ಕಿಲ್ಲ, ಆದರೆ, ಆತನ ಭಾವವನ್ನು ವಿಚಾರವನ್ನು ನಾನು ಬದಲಿಸಿಲ್ಲ, ಆತ ಮತ್ತೆ ಹೇಳಿದ "ಒಮ್ಮೆ ರವೀಂದ್ರನಾಥರು ಬ್ರಹ್ಮಸಮಾಜದ ಆರಾಧನಾ ಮಂದಿರದಲ್ಲಿ ಪ್ರವಚನ ಕೊಟ್ಟರು. ಆ ಆರಾಧನ ಮಂದಿರವು ಇಡೀ ಕಲ್ಕತ್ತೆಯಲ್ಲೇ ಎಲ್ಲಕ್ಕಿಂತ ದೊಡ್ಡ ಮಂದಿರ, ಅದು ಕಿಕ್ಕಿರಿದು ತುಂಬಿತ್ತಲ್ಲದೇ, ಕಿಟಕಿಗಳಲ್ಲಿ ಜನ ನಿಂತಿದ್ದರಲ್ಲದೇ ಸುತ್ತ-ಮುತ್ತ ಜನ ತುಂಬಿ, ಓಣಿಗಳಲ್ಲಿ ನಡೆದು ಹೋಗಲೂ ಸ್ಥಳವಿರಲಿಲ್ಲ."

ನಾವು (ಬ್ರಿಟೀಷರು) ಸಣ್ಣ ಮತ್ತು ದೊಡ್ಡ ಸಂಗತಿಗಳೆರಡನ್ನೂ ವಿನೋದದ ತೆರೆಯಲ್ಲಿ ಮುಚ್ಚಿ ಅವುಗಳ ಬೆಲೆಯನ್ನು ನಿಕೃಷ್ಟವಾಗಿ ಪರಿಗಣಿಸುವ ಜನ. ಇಂತಹ ಸಮಾಜದಲ್ಲಿರುವ ನನ್ನೆಡೆಗೆ ಭಾರತೀಯರು ಬಂದು ಅವರು ರವೀಂದ್ರನಾಥರಿಗೆ ತೋರುವ ಗೌರವಾದರಗಳನ್ನು ನೋಡಿ ನನಗೆ ಸೋಜಿಗವೆನಿಸುತ್ತದೆ. ನಾವು ಬಿಷಪ್ಪಿನ ಮುಖ್ಯ ಆರಾಧನಾ ಮಂದಿರದಲ್ಲಿರುವಾಗ ದೊಡ್ಡ ಜನರಿಗೆ ಇಂತಹ ಗೌರವಾದರಗಳನ್ನು ತೋರುತ್ತೇವೆಯೇ?

ಒಬ್ಬ ಭಾರತೀಯ ನನಗೆ ಹೇಳಿದರು "ನಾನು ಸ್ವತಹ ನೋಡಿದ್ದೇನೆ, ರವೀಂದ್ರನಾಥರು ಪ್ರತಿ ಬೆಳಗುಮುಂಜಾನೆ 3 ಘಂಟೆಗೆ ಧ್ಯಾನದಲ್ಲಿ ಅಲುಗಾಡದೇ ಕುಳಿತುಕೊಳ್ಳುತ್ತಾರೆ. ಮತ್ತು ದೇವರ ಸ್ವಭಾವದ ಮೇಲೆ ಧ್ಯಾನಮಾಡುತ್ತ ಮೈಮರೆತು ಎರಡು ತಾಸುಗಳವರೆಗೆ ಎಚ್ಚರಗೊಳ್ಳುವದಿಲ್ಲ. ಮಹರ್ಷಿಯಾಗಿದ್ದ ಅವರ ತಂದೆಯವರು ಒಮ್ಮೊಮ್ಮೆ ಬೆಳಗುಮುಂಜಾನೆಯಿಂದ ಮರಳಿ ಸಂಜೆಯವರೆಗೆ ಧ್ಯಾನದಲ್ಲಿ ಕುಳಿತಿರುತ್ತಿದ್ದರು. ಒಂದು ಸಾರಿ, ನದಿಯ ಮೇಲೆ ದೋಣಿಯಲ್ಲಿ ಹೋಗುತ್ತಿದ್ದಾಗ ಮಹರ್ಷಿಯವರು ನಿಸರ್ಗದ ಸೌಂದರ್ಯವನ್ನನುಭವಿಸುತ್ತ ಧ್ಯಾನದಲ್ಲಿ ಮುಳುಗಿದ್ದರು. ಆ ಕಾರಣಕ್ಕಾಗಿ ಆ ದೋಣಿಯ ಪ್ರಯಾಣವನ್ನು 8 ಘಂಟೆಗಳ ಕಾಲ ಸ್ಥಗಿತಗೊಳಿಸಬೇಕಾಯಿತು" ಅವರು ಮುಂದುವರೆದು ಎಷ್ಟೋ ತಲೆಮಾರಿನಿಂದ ಮಹಾಪುರುಷರು ಠಾಕೂರರ ಮನೆತನದಲ್ಲಿ ಜನಿಸಿದ್ದಾರೆ

ಎಂಬುದನ್ನು ಹೇಳಿ "ಈಗ ಮಹಾಕಲಾಕಾರರಾದ ಗೋಗೇಂದ್ರನಾಥ, ಮತ್ತು ಅಬನೀಂದ್ರನಾಥ ಠಾಕೂರರಿದ್ದಾರೆ. ರವೀಂದ್ರನಾಥರ ಸಹೋದರ, ದ್ವಿಜೇಂದ್ರನಾಥ ಒಬ್ಬ ಮಹಾ ತತ್ವಜ್ಞಾನಿಯಾಗಿದ್ದಾರೆ. ಅಳಿಲುಗಳು ಮರದ ಕೊಂಬೆಗಳಿಂದ ಇಳಿದು ಬಂದು ಮೊಳಕಾಲ ಮೇಲೇರುತ್ತವೆ ಮತ್ತು ಪಕ್ಷಿಗಳು ಅವರ (ದ್ವಿಜೇಂದ್ರನಾಥರ) ಕೈಗಳ ಮೇಲೆ ಇಳಿದು ಕೂಡುತ್ತವೆ."

ನಾವು ನೈತಿಕ ಅಥವಾ ಬೌದ್ಧಿಕ ಸೌಂದರ್ಯದ ಮೇಲೆ ನಂಬಿಕೆಯನ್ನಿಡಲಾಗದು, ಏಕೆಂದರೆ, ಅವು ಭೌತಿಕ ವಸುಸ್ತಂಗತಿಗಳ ಮೇಲೆ' ಬೇಗನೆ ಅಥವಾ ತಡವಾಗಿಯಾದರೂ ತಮ್ಮ ಪ್ರಭಾವವನ್ನು ಕಳೆದುಕೊಳ್ಳುತ್ತವೆ ಎನ್ನುವದು ತತ್ವಾನಿ ನೀಷೆಯ ಸಿದ್ಧಾಂತ.

ಠಾಕೂರರ ಬಗ್ಗೆ ಗೌರವಯುಕ್ತವಾಗಿ ಮಾತನಾಡುವ ಈ ಜನರ ಮನಸ್ಸಿನಲ್ಲಿ ಕಾಣುವ ಸೌಂದರ್ಯವನ್ನು ನಾನು ಗುರುತಿಸುತ್ತೇನೆ. ಮತ್ತು ಇವರು ನೀಷೆಯ ಸಿದ್ಧಾಂತವನ್ನು ನಂಬಿದವರಂತೆ ನನಗೆ ಕಾಣುತ್ತಾರೆ. ನಾನೆಂದೆ "ಪೂರ್ವದ ದೇಶಗಳಲ್ಲಿ ತಮ್ಮ ಮನೆತನದ ಕೀರ್ತಿಯನ್ನು ಹೇಗೆ ಕಾಪಾಡಬೇಕು ಮತ್ತು ಮುಂದುವರಿಸಬೇಕು ಎಂಬುದನ್ನು ನೀವು ಚೆನ್ನಾಗಿ ಬಲ್ಲಿರಿ. ಒಂದು ದಿನ ಮ್ಯೂಸಿಯಂನ ಸಹಾಯಕನು ಚೀನ ಪ್ರಿಂಟಗಳನ್ನು ಹೊಂದಿಸುತ್ತಿರುವ ಸ್ವಲ್ಪ ಕಪ್ಪಗಿನ ಒಬ್ಬ ವ್ಯಕ್ತಿಯನ್ನು ತೋರಿಸಿ ಹೇಳಿದ 'ಈತ ಅನುವಂಶಿಕವಾಗಿ ಆ ಕೆಲಸದಲ್ಲಿ ಪರಿಣತ, ಈತನ ಮನೆತನದಲ್ಲಿ ಈ ಹುದ್ದೆಯನ್ನು ಅಲಂಕರಿಸಿದ ಹದಿನಾಲ್ಕನೆಯ ವ್ಯಕ್ತಿ ಈತ.'

ಆ ಭಾರತೀಯ ಮತ್ತೆ ಹೇಳಿದ "ರವೀಂದ್ರರು ಬಾಲಕನಾಗಿದ್ದಾಗ ಆತನ ಮನೆಯಲ್ಲಿ ಅವರ ಸುತ್ತಮುತ್ತ ಇದ್ದುವುಗಳೆಂದರೆ ಸಂಗೀತ ಮತ್ತು ಸಾಹಿತ್ಯ" ರವೀಂದ್ರರ ಕವಿತೆಗಳ ಅದ್ಭುತ ಸರಳತೆ ಮತ್ತು ಸಮೃದ್ಧಿಯನ್ನು ನೆನೆದುಕೊಂಡು ನಾನು ಹೇಳಿದೆ "ನಿಮ್ಮ ದೇಶದಲ್ಲಿ ಪ್ರಚಾರಕ್ಕಾಗಿ ಬರೆಯುವ ರೂಢಿ ಬಹಳವಾಗಿದೆಯೆ? ನಮ್ಮ ದೇಶದಲ್ಲಿ ಇಂತಹ ಬರವಣಿಗೆಯನ್ನು ನಾವು ಬಹಳಷ್ಟು ಮಾಡುತ್ತೇವೆ. ಇಂತಹ ಬರವಣಿಗೆಗಳಿಂದ ನಮ್ಮ ಸೃಜನಾತ್ಮಕತೆ

ನಿಂತುಹೋಗುತ್ತದಾದರೂ ಅನಿವಾರ್ಯವಾಗಿ ನಾವು ಇಂತಹ ಬರವಣಿಗೆಗಳನ್ನು ಬರೆಯಬೇಕಾಗುತ್ತದೆ. ನಮ್ಮ ಜೀವನ ನಿರಂತರವಾದ ಯುದ್ಧವಾಗಿರದ ಪಕ್ಷದಲ್ಲಿ ನಮಗೆ ಸ್ವಾರಸ್ಯವಿಲ್ಲ, ಯಾವದು ಒಳ್ಳೆಯದೆಂದು ನಮಗೆ ತಿಳಿದಿಲ್ಲ, ನಮ್ಮ ಬರಹಗಳನ್ನು ಓದುವವರಿಲ್ಲ, ನಮ್ಮ ವಿಚಾರಗಳನ್ನು ಕೇಳುವವರಿಲ್ಲ, ಹಿತವಲ್ಲದ ಅಭಿರುಚಿಗಾಗಿ ಜಗಳ ಕಾಯುವದರಲ್ಲಿಯೆ ನಮ್ಮ ಮುಕ್ಕಾಲುಭಾಗದ ಶಕ್ತಿ ಕಳೆದು ಹೋಗುತ್ತದೆ''.

ಆತನೆಂದ ''ನನಗರ್ಥವಾಗುತ್ತದೆ. ನಮ್ಮಲ್ಲಿಯೂ ಕೂಡ ಪ್ರಚಾರಕ್ಕಾಗಿ ಬರೆಯುವ ರೂಢಿ ಇದೆ. ನಮ್ಮ ಹಳ್ಳಿಗಳಲ್ಲಿ ಮಧ್ಯಯುಗದ ಸಂಸ್ಕೃತ ಭಾಷೆಯಿಂದಾಯ್ದ ಪೌರಾಣಿಕ ಕಥೆಯಾಧರಿತವಾದ ದೊಡ್ಡ ದೊಡ್ಡ ಕವಿತೆಗಳನ್ನು ಹಾಡುತ್ತಾರೆ. ಆದರೆ ಮಧ್ಯೆ ಮಧ್ಯೆ ಜನರು ತಮ್ಮ ಕರ್ತವ್ಯಗಳನ್ನು ತಪ್ಪದೇ ಮಾಡಬೇಕು ಎಂಬ ಬೋಧನೆಯನ್ನು ಅವುಗಳಲ್ಲಿ ಸೇರಿಸುತ್ತಾರೆ.

2

ಗೀತಾಂಜಲಿಯ ಹಸ್ತಪ್ರತಿಯನ್ನು ನಾನು ದಿನಗಟ್ಟಲೇ ನನ್ನೊಡನೆ ಹೊತ್ತುಕೊಂಡು, ರೈಲುಗಳಲ್ಲಿ, ಬಸ್ಸುಗಳಲ್ಲಿ, ರೆಸ್ಟೋರೆಂಟ್‌ಗಳಲ್ಲಿ ಕವಿತೆಗಳನ್ನು ಓದುತ್ತಾ ತಿರುಗಾಡಿದೆ. ಈ ಬರಹಗಳು ಈತನ ಹೃದಯವನ್ನು ಎಷ್ಟು ಕದಲಿಸಿವೆಯಲ್ಲ ಎಂದು ಯಾರಾದರೂ ಅಪಹಾಸ್ಯಗೈದಾರೆಂಬ ಭಯದಿಂದ ಆಗಾಗ ನಾನು ಅದನ್ನು ಮುಚ್ಚಿಟ್ಟುಕೊಳ್ಳುತ್ತಿದ್ದೆ. ನನ್ನ ಭಾರತೀಯ ಮಿತ್ರರು ಹೇಳುವಂತೆ 'ಮೂಲ ಬಂಗಾಳೀ ಭಾಷೆಯಲ್ಲಿರುವ ಈ ಕವಿತೆಗಳು ಸೂಕ್ಷ್ಮಾತಿಸೂಕ್ಷ್ಮ ಸ್ವರತರಂಗಗಳಿಂದ ಕೂಡಿವೆ ಮತ್ತು ನವ್ಯರೀತಿಯ ಛಂದಸ್ಸಿನ ಬಣ್ಣಗಳಲ್ಲಿ ಮೂಡಿಬಂದ ನಾಜೂಕುಗಳನ್ನು ಯಾವದೇ ಭಾಷೆಗೆ ತರ್ಜುಮೆಗೊಳಿಸುವದು ಶಕ್ಯವಿಲ್ಲ.' ಆದರೆ ನಾನು ನನ್ನ ಜೀವನಪರ್ಯಂತ, ಬರೆಯಬೇಕೆಂದು ಕನಸುಕಂಡ ವಿಚಾರಗಳನ್ನು ಇಂಗ್ಲೀಷಿಗೆ ತರ್ಜುಮೆಗೊಂಡ ಈ ಕವಿತೆಗಳು ಪ್ರಕಟಗೊಳಿಸಿವೆ. ಈ ಕವಿತೆಗಳು ಅತ್ಯುತ್ಕೃಷ್ಟ ನೆಲದೊಳಗಿಂದ ನಿರಾಯಾಸವಾಗಿ ಹುಲ್ಲು ಹುಟ್ಟಿಬರುವ ತೆರನ ಜನ್ಮತಳೆದಂತೆ ಭಾಸವಾಗುತ್ತದೆ.

ಕಾವ್ಯ ಮತ್ತು ಧರ್ಮಗಳನ್ನು ಒಂದೇ ಎಂದು ಪರಿಗಣಿಸುತ್ತ ಶತಮಾನಗಳಿಂದ ನಡೆದು ಬಂದ ಭಾರತೀಯ ಸಂಪ್ರದಾಯವು ವಿದ್ವಾಂಸರ ಮತ್ತು ಜನಸಾಮಾನ್ಯರ ಭಾವನೆಗಳನ್ನು, ರೂಪಕಗಳನ್ನು ಶೇಖರಿಸಿಟ್ಟುಕೊಂಡು, ಮತ್ತೆ ಜನಸಮೂಹಕ್ಕೆ ಪಾಂಡಿತ್ಯಭರಿತ ಮತ್ತು ಉದಾತ್ತವಾದ ವಿಚಾರಗಳನ್ನು ಮರಳಿ ತಂದಿದೆ. ಒಂದು ವೇಳೆ ಬಂಗಾಲದ ನಾಗರೀಕತೆ ಕೆಡದೆ ಮುನ್ನಡೆದಲ್ಲಿ ಎಲ್ಲದರಲ್ಲಿಯೂ ಒಂದೇ ತೆರನಾಗಿರುವ ಮನಸ್ಸು ನಮ್ಮಲ್ಲಿ (ಬ್ರಿಟೀಷರಲ್ಲಿ) ಮುರಿದು ಹೋಳಾಗಿರುವಂತೆ, ಮುರಿಯದೇ ಇದ್ದರೆ, ಈ ಕವಿತೆಗಳಲ್ಲಿರುವ ಸೂಕ್ಷ್ಮಾತಿಸೂಕ್ಷ್ಮ ಭಾವನೆಗಳು ಕೆಲ ತಲೆಮಾರು ಕಳೆಯುವಷ್ಟರಲ್ಲಿಯೇ, ಬಂಗಾಳದ ರಸ್ತೆಯಲ್ಲಿರುವ ಭಿಕ್ಷುಕನಿಗೂ ಬಂದು ಬಿಡುತ್ತವೆ.

ಬ್ರಿಟಿಷ್ ಜನರ ಮನಸ್ಸು ಒಡೆಯದೇ ಒಂದೇ ಆಗಿದ್ದ ಕಾಲದಲ್ಲಿ ಚಾಸರ್, ಟ್ರಾಯಿಲಸ್ ಅಂಡ್ ಕ್ರೆಸ್ಸಿಡಾ (Troilus and cresida) ಗ್ರಂಥವನ್ನು ಬರೆದ. ಆತ ಅದನ್ನು ಜನರು ಓದುವದರ ಸಲುವಾಗಿ ಅಥವಾ ಓದಿ ಹೇಳುವದರ ಸಲುವಾಗಿ ಬರೆದಿದ್ದನಾದರೂ, ಅದನ್ನು ಕೆಲಸಮಯ ಲಾವಣಿ ರೂಪದಲ್ಲಿ ಹಾಡುವ ರೂಢಿಯಾಗಿತ್ತು. ಚಾಸರನ ಮುಂಚಿನ ಕವಿಗಳಂತೆ, ಠಾಕೂರರು ತಮ್ಮ ಶಬ್ದಗಳಿಗೆ ಸಂಗೀತವನ್ನು ತುಂಬುತ್ತಾರೆ. ಅವರ ಕವಿತೆಗಳನ್ನು ಓದುವಾಗ ಇವು ಎಷ್ಟು ಸಮೃದ್ಧವಾಗಿವೆ, ಎಷ್ಟು ಪ್ರಕೃತಿಸಿದ್ಧವಾಗಿ, ಆಯತ್ನಪೂರ್ವಕವಾಗಿ ಹುಟ್ಟಿಬಂದಿವೆ, ಎಷ್ಟು ವಿಸ್ಮಯಕಾರಕವಾಗಿವೆ ಮತ್ತು ಭಾವೋದ್ರೇಕವನ್ನು ಎಷ್ಟು ಧೈರ್ಯವಾಗಿ ಅವು ಬಿಂಬಿಸುತ್ತವೆ, ಎಂಬ ತಿಳುವಳಿಕೆ ಪ್ರತಿಯೊಬ್ಬ ಓದುಗನಿಗೂ ಉಂಟಾಗುತ್ತದೆ. ಏಕೆಂದರೆ ರವೀಂದ್ರರು ಬರೆಯುವದು ಸೋಜಿಗದ ವಸ್ತುವಲ್ಲ, ಅಸ್ವಾಭಾವಿಕವಾದದ್ದಲ್ಲ, ಅವರ ಅಭಿವ್ಯಕ್ತಿಗೆ ಯಾರ ರಕ್ಷಣೆಯೂ ಬೇಕಾಗಿಲ್ಲ ಎಂಬ ಅರಿವು ಓದುಗನಿಗೆ ಉಂಟಾಗುತ್ತದೆ.

ಈ ಕವಿತೆಗಳು ಸಣ್ಣ ಸುಂದರ ಪುಸ್ತಕಗಳಲ್ಲಿ ಮುದ್ರಣಗೊಂಡು, ಜೀವನವನ್ನು ಅರಿತುಕೊಳ್ಳುವ ಮೊದಲೇ, ಬದುಕಿನ ಬಗ್ಗೆ ಅರ್ಥವಿಲ್ಲದ

ನಿಟ್ಟುಸಿರನ್ನು ಬಿಡುತ್ತಾ, ತಮ್ಮ ಆಲಸ್ಯ ತುಂಬಿದ ಕೈಗಳಿಂದ ಪುಟಗಳನ್ನು ತಿರಿವಿ ಹಾಕುವಂತಹ ಮಹಿಳೆಯರ ಮೇಜಿನ ಮೇಲೆ ಬಿದ್ದುಕೊಂಡಿರಲು ಅಲ್ಲ, ಅಥವಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳು ತಮ್ಮ ಕೈಯಲ್ಲಿ ಈ ಪುಸ್ತಕವನ್ನು ಹಿಡಿದುಕೊಂಡು, ನಿಜವಾಗಿ ಅವರ ಜೀವನದ ಹೋರಾಟ ಪ್ರಾರಂಭವಾಗುವ ವೇಳೆಗೆ, ಅದನ್ನು ಆ ಕಡೆ ಇಟ್ಟು ಬಿಡಲಿಕ್ಕಲ್ಲ. ಆದರೆ, ತಲೆಮಾರುಗಳು ಕಳೆದಂತೆ, ಈ ಕವಿತೆಗಳನ್ನು ಹಾದಿಬದಿಯಲ್ಲಿ ನಡೆದಾಡುವ ಜನರು ಹಾಗೂ ನದಿಗಳ ಮೇಲೆ ದೋಣಿಗಳಲ್ಲಿ ತೇಲುತ್ತಿರುವ ಪಯಣಿಗರು ಹಾಡುತ್ತ ಸಾಗುತ್ತಾರೆ.

ಮಿಲನಕ್ಕಾಗಿ ಕಾಯುತ್ತಿರುವ ಪ್ರೇಮಿಗಳು ಈ ಕವಿತೆಗಳ ಸ್ಮರಣೆಯಿಂದ ತಮ್ಮ ಹೃದಯದಲ್ಲಿ ಹುಟ್ಟಿದ ವಿರಹದ, ಭಾವೋತ್ಕಟತೆಯು, ಭಗವದ್‌ಪ್ರೇಮವೆಂಬ ಮಾಂತ್ರಿಕ ಕಂದರದಲ್ಲಿ ಮಿಂದು, ಮತ್ತೆ ನವ ಯೌವನವನ್ನು ಪಡೆದುಕೊಂಡ ಅನುಭವವನ್ನು ಪಡೆಯುತ್ತಾರೆ. ಇಂತಹ ಜನರ ಗೌರವಕ್ಕೆ ಕುಂದು ತರದೆ, ಈ ಕವಿಯ ಹೃದಯ ಅತಿ ಸಲುಗೆಯಿಂದ ಪ್ರತಿಚಣವು ಇವರೆಡೆಗೆ ಹೊರಡುತ್ತದೆ. ಏಕೆಂದರೆ, ಇಂತಹ ಭಾವ ಜೀವಿಗಳ ಬದುಕಿನ ಪರಿಸ್ಥಿತಿಗಳನ್ನು ತನ್ನೊಳಗೆ ತುಂಬಿಕೊಂಡಿರುವದರಿಂದ ತನ್ನನ್ನು ಅವರು ಅರ್ಥಮಾಡಿಕೊಳ್ಳುತ್ತಾರೆಂದು ರವೀಂದ್ರರ ಹೃದಯಕ್ಕೆ ತಿಳಿದಿದೆ.

ತನ್ನ ಮೇಲೆ ಕುಳಿತ ಧೂಳು, ಹೊರಗೆ ಕಾಣದಿರಲಿ ಎಂದು ಕೆಂಪು, ಕಂದುಮಿಶ್ರಿತ ಬಟ್ಟೆಗಳ ಧರಿಸಿದ ಪಯಣಿಗ, ರಾಜನಾದ ತನ್ನ ಪ್ರಿಯತಮನ ಕೊರಳಹಾರದೊಳಗಿಂದ ಬಿದ್ದ ಹೂವಿನ ದಳಗಳನ್ನು ಹಾಸಿಗೆಯಲ್ಲಿ ಹುಡುಕುವ ಕನ್ಯೆ, ತನ್ನ ಬರಿದಾದ ಮನೆಯಲ್ಲಿ ತನ್ನೊಡೆಯನ ಬರುವಿಕೆಗಾಗಿ ಕಾಯುತ್ತಿರುವ ದಾಸಿ ಅಥವಾ ಮದುಮಗಳು ಇವು ಹೃದಯವು ದೇವರೆಡೆಗೆ ತಿರುಗುತ್ತಿರುವುದರ ಪ್ರತಿಮೆಗಳು. ಸುಂದರವಾದ ಹೂಗಳು, ನದಿಗಳು, ಶಂಖನಾದ, ಭಾರತದ ಶ್ರಾವಣಕಾಲದ ಸುರಿವ ಮಳೆ, ಅಥವಾ ಮೈಸುಡುವ ಬೇಸಿಗೆ, ಇವು ವಿರಹ ವೇದನೆ ಅಥವಾ ಮಿಲನ, ತರುವ ಸಂತಸದ ಮನಃಸ್ಥಿತಿಯನ್ನು ಬಿಂಬಿಸುವ ಪ್ರತಿಮೆಗಳು. ನಿಗೂಢತೆಯನ್ನು ಬಿಂಬಿಸುವ

ಚೀನಾದೇಶದ ಒಂದು ಚಿತ್ರದಂತೆ, ನದಿಯ ಮೇಲಿನ ಒಂದು ನಾವೆಯಲ್ಲಿ ಕೊಳಲನೂದುತ ಕುಳಿತ ವ್ಯಕ್ತಿ ಸ್ವತಹ ದೇವರೆ. ನಮಗೆ ಅಳತೆಗೆ ದಕ್ಕಲಾರದಷ್ಟು ಅಪರಿಚಿತವಾದ ಭಾರತದೇಶದ ಇಡೀ ಜನಸಮೂಹ, ಇಡೀ ನಾಗರೀಕತೆಯು ಈ ಕವಿತೆಗಳಲ್ಲಿರುವ ಕಲ್ಪನೆಯ ಒಳಗೆ ತುಂಬಿಕೊಂಡಂತೆ ಭಾಸವಾಗುತ್ತದೆ. ಆದರೂ ನಮ್ಮ ಹೃದಯಗಳು ಕಲಕಿರುವದು ಬರೀ ಈ ಅಪರಿಚಿತತೆಯಿಂದಲ್ಲ, ರೋಜೆಟ್ಟಿಯ ವಿಲ್ಲೋವುಡ್ (Ropsetti's Willow wood) ನಲ್ಲಿ ನಡೆದು, ನಮ್ಮ ಪ್ರತಿಮೆಗಳನ್ನು ನಾವೇ ಕಂಡಂತಾಗಿ, ಅಥವಾ ಸಾಹಿತ್ಯದಲ್ಲಿ ಮೊಟ್ಟಮೊದಲಿಗೆ, ನಮ್ಮ ಧ್ವನಿಯನ್ನು ನಾವೇ ಕನಸಿನಲ್ಲಿ ಎಂಬಂತೆ ಕೇಳಿ, ನಮ್ಮ ಹೃದಯಗಳು ಅಷ್ಟೊಂದು ಕದಲಿವೆ.

ಯುರೋಪಿನ ಪುನರುಜ್ಜೀವನ ಕಾಲದಿಂದ, ಯೂರೋಪಿನ ಸಂತರು ಬರೆದ ಬರಹಗಳು, ಅವರ ವಿಚಾರ ವೈಖರಿ ಮತ್ತು ರೂಪಾಲಂಕಾರಗಳು ನಮಗೆ ಎಷ್ಟೇ ಆಪ್ತವಾಗಿದ್ದರೂ ಸಹ ನಮ್ಮನ್ನು ಆಕರ್ಷಿಸಲು ಅವು ವಿಫಲವಾದವು. ಒಂದು ದಿನ ಈ ಜಗತ್ತನ್ನು ತೊರೆಯಬೇಕೆಂದು ನಾವು ಬಲ್ಲೆವು. ನಮ್ಮ ಅತ್ಯಂತ ದುಃಖದ ಅಥವಾ ಅತ್ಯಂತ ಸಂತಸದ ಚಣಗಳಲ್ಲಿ ಈ ಜಗದ ಬಂಧನಗಳನ್ನು ಸ್ವ ಇಚ್ಛೆಯಿಂದ ಕಡಿದು ಹಾಕುವ ಕ್ರಿಯೆಯನ್ನು ರೂಢಿಸಿಕೊಂಡಿದ್ದೇವೆ. ಆದರೆ ಈ ಮಾಂಸಲ ದೇಹ ಮತ್ತು ಆತ್ಮದ ಕೂಗುಗಳೆರಡೂ ಒಂದೇ ಎಂದು ಸಾರುವ ಅಷ್ಟೊಂದು ಕವಿತೆಗಳನ್ನು ಓದಿ ಅಷ್ಟೊಂದು ಚಿತ್ರಗಳನ್ನು ನೋಡಿ, ಅಷ್ಟೊಂದು ಸಂಗೀತವನ್ನು ಕೇಳಿದ ನಾವು (ಪಾಶ್ಚಾತ್ಯರು) ಈ ಜಗತ್ತನ್ನು ನಿರ್ದಯವಾಗಿ ಕಾಠಿಣ್ಯವನ್ನು ಪ್ರದರ್ಶಿಸಿ ತಕ್ಷಣ ಹೇಗೆ ತೊರೆಯಬಲ್ಲೆವು? ಸ್ವಿಟ್ಜರ್ಲ್ಯಾಂಡಿನ ಸರೋವರಗಳ ಸೌಂದರ್ಯದ ಮೇಲೆ ತನ್ನ ದೃಷ್ಟಿ ಬೀಳಬಾರದೆಂದು ತನ್ನ ಕಣ್ಣುಗಳನ್ನು ಮುಚ್ಚಿಕೊಳ್ಳುವ ಸಂತ ಬರ್ನಾರ್ಡ್ ಅಥವಾ ಬುಕ್ ಆಫ್ ರಿವೀಲೇಷನ್ (Book of Revelation)ನ ರಭಸದ ಮನವೊಪ್ಪಿಸುವ ಪ್ರತಿಪಾದನೆ ಮತ್ತು ನಮ್ಮ ನಡುವೆ ಇರುವ ಸಾಮಾನ್ಯವಾದ ಭಾವ ಯಾವುದು? ಠಾಕೂರರ ಕವಿತೆಯಲ್ಲಿ ಕಾಣುವ ವಿನೀತಭಾವದ ಮಾತುಗಳು ನಮಗೆ ದೊರಕಿದಲ್ಲಿ ನಾವೂ ಈ ಜಗತ್ತನ್ನು ತೊರೆಯಬಲ್ಲೆವು.

"ನಾನು ಹೊರಡುತಿಹೆ ಸೋದರರೆ
ನನಗೆ ಶುಭವ ಹಾರೈಸಿ,
ನಿಮಗೆಲ್ಲರಿಗೂ ನಮಿಸಿ, ನಿಮ್ಮಿಂದ
ಬೀಳ್ಕೊಳ್ಳುತಿರುವೆ.

ತೆಗೆದುಕೊಳ್ಳಿ, ನನ್ನ ಮನೆಯ ಬೀಗದ ಕೈಗಳನು.
ಈ ಮನೆಯ ಮೇಲಿನ ನನ್ನೆಲ್ಲ ಹಕ್ಕುಗಳನು
ಬಿಟ್ಟುಕೊಟ್ಟಿಹೆ ನಾನು.
ಕರುಣೆ ತುಂಬಿದ ಕೊನೆಯ ನುಡಿಗಳನು ಮಾತ್ರ
ಕೊಡಿರೆಂದು ನಿಮ್ಮ ಕೇಳುತಿಹೆನು

ಬಹು ಸಮಯದಿಂದ,
ನಾವು ನೆರೆಹೊರೆಯರಾಗಿಹೆವು, ಆದರೆ
ನಾನು ಕೊಟ್ಟಿರುವದಕ್ಕಿಂತಲೂ
ನಿಮ್ಮಿಂದ ಪಡೆದಿರುವದೇ ಹೆಚ್ಚು,
ಈಗ ದಿನಕರನುದಯಿಸಿಹನು,
ಈವರೆಗೆ ನನ್ನ ಕತ್ತಲಿನ ಮೂಲೆಯನು
ಬೆಳಗಿದ ದೀಪ ಶಾಂತವಾಗಿಹುದು.
ಕರೆಯು ಬಂದಿಹುದೆನಗೆ
ನನ್ನ ಪಯಣಕ್ಕೆ ಸಿದ್ಧನಾಗಿಹೆನು. (93ನೇ ಕವಿತೆ)

A Kempis or John of the cross ನಲ್ಲಿ ಹೇಳಿರುವ ನಮ್ಮ ಮನಃಸ್ಥಿತಿಯೇ ಈ ಕೆಳಗಿನ ಸಾಲುಗಳಲ್ಲಿರುವ ಭಾವ

"ಈ ಜೀವನವ ನಾ ಪ್ರೀತಿಸುವೆನದರಿಂದ
ಸಾವನೂ ಪ್ರೀತಿಸಬೇಕೆಂಬುದನು ಬಲ್ಲೆನಾನು." (95ನೇ ಕವಿತೆ)

ಆದರೂ ಅಗಲುವಿಕೆಯ ಸಮಯದಲ್ಲಿ ನಮ್ಮಲ್ಲಿ ಬರುವ

ವಿಚಾರಗಳಿಂದ ಮಾತ್ರ ಈ ಕವಿತೆಗಳು ನಮಗೆ ಆಪ್ಯಾಯಮಾನವಾಗುವದಿಲ್ಲ ನಾವು ದೇವರನ್ನು ಪ್ರೀತಿಸುತ್ತೇವೆ ಎನ್ನುವದು ನಮಗೆ ತಿಳಿದೇ ಇರಲಿಲ್ಲ ದೇವರಲ್ಲಿ ನಾವು ನಂಬಿಕೆಯನ್ನಿಟ್ಟಿದ್ದೇವೆ ಎಂದು ಹೇಳಬಹುದು. ಆದರೂ ನಾವು ನಡೆದು ಬಂದ ನಮ್ಮ ಜೀವನದ ದಾರಿಯನ್ನು ಅವಲೋಕಿಸಿದಾಗ ಕಂಡು ಬರುವದೇನೆಂದರೆ, ಕಾಡಿನ ದಾರಿಗಳ ಶೋಧನೆಯಲ್ಲಿ ಬೆಟ್ಟಗಳ ಏಕಾಂತದ ಸ್ಥಳಗಳ ಆನಂದದಲ್ಲಿ ನಾವು ಪ್ರೀತಿಸಿದ ಹೆಣ್ಣುಮಕ್ಕಳ ಮೇಲೆ ನಿಗೂಢರೀತಿಯಲ್ಲಿ ನಮ್ಮ ಪ್ರಭುತ್ವವನ್ನು ಕೇಳುವಲ್ಲಿ ಗುಟ್ಟಾದ ಮಾಧುರ್ಯವನ್ನು ಹುಟ್ಟಿಸಿದ ಇಂತಹ ಭಾವವನ್ನು ನಾವು ಹೊಂದಿದ್ದನ್ನು ಕಾಣುತ್ತೇವೆ.

"ಎನಿತೋ ಜಾರಿ ಮರೆಯಾಗುವ ಚಣಗಳಲಿ
ಸಾಮಾನ್ಯ ಜನಜಂಗುಳಿಯಲೊಬ್ಬನಾಗಿ
ಎನಗರಿವಿಲ್ಲದೇ ಎನ್ನೆದೆಯ ಒಳಹೊಕ್ಕು
ಅಸಂಖ್ಯ ಆನಂತದ ಮುದ್ರೆಗಳನೊತ್ತಿಹೆಯಲ್ಲ!"

(43ನೇ ಕವಿತೆ)

ಇದು ಸನ್ಯಾಸಿ ಮಠಗಳಲ್ಲಿರುವ ಅಥವಾ ಕಷ್ಟ ಮತ್ತು ಸಂಕಟಗಳಿಂದ ಅನುಭವವಾಗುವ ಪಾವಿತ್ರ್ಯತೆಯಷ್ಟೇ ಅಲ್ಲ ಆದರೆ, ಧೂಳು ಮತ್ತು ರವಿಯ ಬೆಳಕನ್ನು ಚಿತ್ರಿಸುವ ಚಿತ್ರಕಾರನ ಮನಃಸ್ಥಿತಿಯನ್ನು ಇನ್ನೂ ಉದ್ದೀಪನಗೊಳಿಸುವ ಪ್ರಕ್ರಿಯೆಯು, ಮತ್ತು ಈ ಭಾವನೆಗಳಿಂದ, ನಮ್ಮ (ಬ್ರಿಟಿಷರ) ರಭಸದ ಮತ್ತು ಹಿಂಸಾತ್ಮಕ ಇತಿಹಾಸದಲ್ಲಿ ನಮಗೆ ಅಪರಿಚಿತರಾದಂತೆ ಕಾಣುತ್ತಿರುವ ಸಂತ ಫ್ರಾನ್ಸಿಸ್ ಮತ್ತು ವಿಲಿಯಂ ಬ್ಲೇಕ್‌ರವರ ಈ ತರಹದ ಮಾತುಗಳೆಡೆಗೆ ನಾವು ನಡೆಯತೊಡಗುತ್ತೇವೆ.

– 3 –

ನಾವು (ಬ್ರಿಟಿಷರು) ಹಣಗಳಿಸಲು ಬಡಿದಾಡಿ ಸಾಮಾನ್ಯ ಸಂಗತಿಗಳ ಬಗ್ಗೆ ಏನೂ ಹುರುಳಿಲ್ಲದ ಬಹು ಪುಟಗಳ ದೊಡ್ಡ ದೊಡ್ಡ ಪುಸ್ತಕಗಳನ್ನು ಬರೆದು,

ನಮ್ಮ ತಲೆಯಲ್ಲಿ ರಾಜಕೀಯವನ್ನೂ ನಿಸ್ಸಾರವಾದ ವಿಷಯಗಳನ್ನೂ ತುಂಬಿಕೊಳ್ಳುತ್ತೇವೆ. ಆದರೆ, ಠಾಕೂರ್‌ರವರು, ಭಾರತದ ನಾಗರೀಕತೆಗನುಗುಣವಾಗಿ, ತಮ್ಮನ್ನೇ ತಾವು ಸಹಜತೆಗೆ ಒಪ್ಪಿಸಿಕೊಳ್ಳುವಲ್ಲಿ ಮತ್ತು ಆತ್ಮನ ಹುಡುಕುವಿಕೆಯಲ್ಲಿ ತೃಪ್ತಿ ಪಡೆಯುತ್ತಾರೆ. ನಮ್ಮ (ಪಾಶ್ಚಾತ್ಯ) ಜೀವನಶೈಲಿಯಲ್ಲಿ ಬದುಕಿ, ತೋರಿಕೆಗೆ ಯಶಸ್ಸು ಪಡೆದವರಂತೆ ಕಾಣುತ್ತಿರುವ ಜನರೊಡನೆ ರವೀಂದ್ರರು ತಮ್ಮ ಜೀವನವನ್ನು ಆಗಾಗ್ಗೆ ಹೋಲಿಸಿಕೊಂಡು ನೋಡುತ್ತಾರೆ ಮತ್ತು ತಾವು ಅನುಸರಿಸಿದ ಬದುಕಿನ ರೀತಿಯೇ ಅತ್ಯುತ್ತಮ ಎನ್ನುವಂತೆ ಹೀಗೆ ಹೇಳುತ್ತಾರೆ.

"ದಾರಿಹೋಕರು ನನ್ನೆಡೆಗೆ ನೋಡಿ, ನಗಲು
ನಾಚಿಕೆಯಿಂದ ತುಂಬುವುದೆನ್ನ ಮನವು.
ತನ್ನಡುಪನೇ ತನ್ನ ಮೊಗದ ಮೇಲೆಳೆದುಕೊಂಡು
ಕುಳಿತ ಭಿಕ್ಷುಕಿಯೊಲು,
ನಿನಗಾಗಿ ಕಾಯುತ್ತ ಕುಳಿತಿರುವೆನಿಲ್ಲಿ,
'ಏನು ಬೇಕಿದೆ ನಿನಗೆ' ಎಂದವರು ನನ್ನ ಕೇಳುವರು
ನಾನುತ್ತರಿಸಲಾರೆ - ಕಣ್ಮುಚ್ಚಿ ಮೌನ ತಳೆವೆ" (41ನೇ ಕವಿತೆ)

ತಮ್ಮ ಜೀವನದ ರೀತಿ ಮೊದಲು ಬೇರೆ ತೆರನಾಗಿದ್ದುದನ್ನು ನೆನೆದುಕೊಂಡು ಹೀಗೆನ್ನುತ್ತಾರೆ.

"ನನ್ನ ಬಹುಪಾಲು ಸಮಯವನು
ಒಳಿತು ಕೆಡುಕುಗಳನಡುವಿನ ಹೋರಾಟದಲಿ ಕಳೆದಿಹೆನು.
ಆದರೀಗ,
ನನ್ನ ಶೂನ್ಯದಿನಗಳ ಒಡನಾಡಿಯು,
ನನ್ನ ಹೃದಯವ ತನ್ನೆಡೆಗೆ ಸೆಳೆದುಕೊಳ್ಳುವ
ಸಮಯ ಬಂದಿಹುದು.
ಆವ ನಿರುಪಯುಕ್ತ ಅಸಂಗತಕ್ಕೆ
ಈ ಅನಿರೀಕ್ಷಿತ ಕರೆಯೆಂದು ಅರಿಯೆ ನಾನು" (89ನೇ ಕವಿತೆ)

ಬೇರೆ ಯಾವ ಸಾಹಿತ್ಯದಲ್ಲಿಯೂ ಇರದಷ್ಟು ಮುಗ್ಧತೆ ಮತ್ತು ಸರಳತೆಯಿಂದ ಬರೆಯುವ ರವೀಂದ್ರರಿಗೆ, ಮರದ ಎಲೆಗಳು, ಪಕ್ಷಿಗಳು, ಎಳೆಯ ಮಕ್ಕಳಿಗಾಗುವಷ್ಟು ಆಪ್ಯಾಯಮಾನವಾಗಿವೆ. ಋತುಗಳ ಬಗ್ಗೆ ತಿಳುವಳಿಕೆ ಇರದ ಕಾಲದಲ್ಲಿ ಮಾನವನಿಗೆ ಅವುಗಳ ಬದಲಾಗುವಿಕೆಯು ಬಹುದೊಡ್ಡ ಸಂಗತಿಯಾದಂತೆಯೇ ರವೀಂದ್ರರಿಗೆ ಋತುಗಳ ಬದಲಾಗುವಿಕೆಯು ಅಷ್ಟೇ ಮಹಾಸಂಗತಿ.

ಇದನ್ನು ಬಂಗಾಳದ ಸಾಹಿತ್ಯದಿಂದ ಅವರು ಪಡೆದುಕೊಂಡರೆ? ಅಥವಾ ತಮ್ಮ ಧರ್ಮದೊಳಗಿಂದ ಪಡೆದುಕೊಂಡರೆ? ಎಂದು ನಾನು ಬೆರಗಾಗುತ್ತೇನೆ. ಮತ್ತೊಮ್ಮೆ ವಿಚಾರಿಸಿ, ಅವರ ಸಹೋದರನ ಮೇಲೆ ಪಕ್ಷಿಗಳು ಇಳಿದು ಬಂದು ಕೂರುತ್ತಿದ್ದವು ಎಂಬುದನ್ನು ನೆನೆದು Tristan ಅಥವಾ a palanoreರ ಅನುಗ್ರಹದಿಂದ, ಶತಮಾನಗಳಿಂದ ಬೆಳೆಯುತ್ತಿರುವ ನಿಗೂಢತೆಯಂತೆ, ಇದು ಅವರಿಗೆ ಆನುವಂಶಿಕವಾಗಿ ಬಂದಿರಬಹುದು ಎಂದು ಯೋಚಿಸಿ ಸಂತೋಷಪಟ್ಟುಕೊಳ್ಳುತ್ತೇನೆ. ತನ್ನ ವ್ಯಕ್ತಿತ್ವದ ಒಂದು ಭಾಗ ಮಕ್ಕಳಂತೆಯೇ ಇರುವ ರವೀಂದ್ರರು ಹಸುಳೆಗಳ ಬಗ್ಗೆ ಮಾತನಾಡುವಾಗ ಇವರು ಸಂತರ ಬಗೆ ಮಾತನಾಡುತ್ತಿಲ್ಲ ಎಂದು ಖಚಿತವಾಗಿ ಹೇಳಲಾಗುವದಿಲ್ಲ.

"ಮರಳಿನಲಿ ತಮ್ಮ ಮನೆಗಳನು ಕಟ್ಟುವರು
ಬರಿದಾದ ಚಿಪ್ಪು ಶಿಂಪಿಗಳಕೊಂಡು ಆಡುತಿಹರು
ತರಗೆಲೆಗಳಿಂದ ಹರಿಗೋಲ ಹೆಣೆವರು
ಅವುಗಳನು ನಗುನಗುತ ವಿಶಾಲದಲಿ ತೇಲಿಸುವರು
ಜಗಂಗಳ ಸಾಗರತೀರದಲಿ,
ಹಸುಳೆಗಳು ತಮ್ಮ ಆಟಗಳನಾಡುತಿಹರು.

ಹೇಗೆ ಈಜುವದೆಂದು ತಿಳಿಯರವರು
ಬಲೆಯ ಬೀಸುವುದನು ಅರಿಯರವರು
ಈಜುಗಾರರು ಮುತ್ತುಗಳ ತೆಗೆಯಲು

ಮುಳುಗುಹಾಕುತಿಹರು.
ವರ್ತಕರು ತಮ್ಮ ಹಡಗುಗಳೊಡನೆ ತೇಲುತಿಹರು
ಆದರೆ, ಈ ಹಸುಳೆಗಳು,
ಚಿಪ್ಪುಗಳ ಕೂಡಿಸಿ ಮತ್ತೆ ಚಲ್ಲವರಿಯುವರು
ಗುಪ್ತ ನಿಧಿಗಾಗಿ ಹುಡುಕಾಡರವರು
ಬಲೆಯ ಬೀಸುವುದನು ಅರಿಯರವರು" (60ನೇ ಕವಿತೆ)

ಸೆಪ್ಟೆಂಬರ್ 1912

ಡಬ್ಲ್ಯೂ.ಬಿ ಏಟ್ಸ

# ಗೀತಾಂಜಲಿ

೧

ನನ್ನನು ಅನಂತವಾಗಿಸಿಹೆ ನೀನು,
ಇದು ನಿನ್ನ ಸಂತಸವು.
ಈ ಒಡೆವ ಮಡಿಕೆಯ ನೀನು
ಮರ ಮರಳಿ ಬರಿದಾಗಿಸಿ,
ಸದಾ ಹೊಸ ಜೀವ ರಸದಿಂದ ತುಂಬಿರುವೆ.

ಈ ಸಣ್ಣ ಕೊಳಲ, ನೀ,
ಕಾಡು ಮೇಡುಗಳ ಮೇಲೊಯ್ದು
ಹೊಚ್ಚ ಹೊಸ ರಾಗಗಳ
ನುಡಿಸಿರುವೆಯಲ್ಲ!

ನಿನ್ನ ಅಮೃತಸ್ಪರ್ಶದಿಂ,
ನನ್ನೆದೆಯ ಸಂತಸವು ಮೇರೆಯನು ದಾಂಟಿ,
ಮತಿಗೆ ಮೀರಿದ ಮಾತುಗಳ ಉಲಿಯುತಿಹೆನಲ್ಲ!

ನಿನ್ನನಂತದ ಕೊಡುಗೆಗಳು,
ಈ ಸಣ್ಣ ಕೈಗಳಿಂದಲೇ,
ನನ್ನೆಡೆಗೆ ಬರುತಿಹವು.
ಕಲ್ಪಗಳು ಕಳೆದಿಹವು, ಆದರೂ,

ನೀ ಸುರಿಯುತಿಹೆ, ಮೇಣ್,
ನನ್ನೊಳಿನ್ನೂ ಸ್ಥಳವಿಹುದು – ತುಂಬಿಕೊಳೆ.

೨

ಹಾಡೆಂದು ನೀ ಬೆಸಗೊಂಡಾಗ,
ಬಿರಿದು ಹೋಗುವೊಲು ನನ್ನ ಎದೆಯುಬ್ಬುವುದು.
ಹನಿದುಂಬಿದೆನ್ನ ಕಂಗಳಿಂದ,
ನಿನ್ನ ಮೊಗವ ನೋಡುವೆನು.

ಬದುಕಿನ ಎಲ್ಲ ದುಃಖದ ನೆನಪುಗಳು,
ಒಂದು ಸಿಹಿಯಾದ ಸಮಷ್ಟಿಯಲಿ ಕರಗಿ ನಿಲ್ಲುವವು.
ಸಂತಸದುಂಬಿದ ಹಕ್ಕಿ,
ಸಾಗರದ ಎದೆಯ ಮೇಲ್
ಹಾರುವಂದದಿ ನನ್ನ ಪೂಜ್ಯ ಭಾವ,
ಬಿಚ್ಚುವುದು ತನ್ನ ಮನದ ರೆಕ್ಕೆಯನು.

ನಾ ಬಲ್ಲೆ ನಿನ್ನೆದುರು
ನಾನೊಬ್ಬ ಹಾಡಿಗನು ಮಾತ್ರ, ಮೇಣ್,
ನೀನೆನ್ನ ಹಾಡಿನಲಿ ಸಂತಸವ ಪಡೆವೆ.

ನಾನು ಮುಟ್ಟಲಸದಳವಾದ ನಿನ್ನ ಪಾದಗಳನು,
ನನ್ನ ಹಾಡಿನ ಚಾಚಿದ ರೆಕ್ಕೆಯ,
ಕೊನೆಯ ತುದಿಯಿಂದ ಮುಟ್ಟುವೆನು,

ಹಾಡು ಹಾಡುವ ಸಂತಸದಿ ಮೈಮರೆತು,
ಒಡೆಯನಾದ ನಿನ್ನ ಗೆಳೆಯನೆನ್ನುವೆನು.

೩

ನೀ ಹೇಗೆ ಹಾಡುವೆಯೆಂದು,
ನಾನರಿಯೆ ನನ್ನೊಡೆಯ.
ಬೆರಗಿನಿಂ ಮೌನದಲಿ ಕೇಳುವೆನು ಆ ಹಾಡ.

ನಿನ್ನ ಹಾಡಿನಿಂ ಒಗೆವ ಬೆಳಕು,
ಜಗವ ಬೆಳಗುವದು.
ಆ ಹಾಡಿನಿಂ ಒಗೆವ
ಜೀವದುಂಬಿದ ಉಸಿರು,
ಆಗಸದ ತುಂಬೆಲ್ಲ ಪಸರಿಸಿಹುದು.
ಆ ಹಾಡಿನಿಂ ಹೊರಟ ಜೀವಸೆಲೆಯು,
ಹಾದಿಯಲಿ ಬರುವ ಅಡೆತಡೆಗಳನೊಡೆದು;
ಧೀಂಕೆಂದು ದುಮ್ಮಿಕ್ಕುತಿಹುದು.

ನಿನ್ನ ಹಾಡಿನೊಡನೊಂದಾಗೆ
ಹಲುಬುವುದು ನನ್ನ ಎದೆ.
ಆದರೆ ವ್ಯರ್ಥದಲಿ
ಧ್ವನಿಗಾಗಿ ಒರಲುತಿಹೆನು.
ನಾನು ಆಡುವೆನಯ್ಯೋ,
ಆ ಮಾತು ಹಾಡಾಗದು.

ಕೈಚೆಲ್ಲಿ ಕಣ್ಣೀರು ಸುರಿಸುತಿಹೆನು.

ಆಹ್! ನನ್ನೊಡೆಯ,
ನಿನ್ನ ಹಾಡಿನ ಅನಂತ ಬಲೆಯಲ್ಲಿ
ನನ್ನದೆಯ ಹಿಡಿದು, ಬಂದಿಯಾಗಿಸಿಹೆಯಲ್ಲ!

೪

ನಿನ್ನ ಜೀವದುಂಬಿದ ಸ್ಪರ್ಶ
ನನ್ನ ದೇಹದ ಮೇಲಿದೆಯುಂದರಿದು
ನನ್ನ ಜೀವದ ಜೀವವನು,
ಶುದ್ಧವಾಗಿಡುವೆ.

ತರ್ಕದ ನಿಜ ಬೆಳಕ
ನನ್ನ ಬುದ್ಧಿಯಲಿ ತುಂಬಿರುವ
ಆ ಸತ್ಯವೇ ನೀನೆಂದು
ಎಲ್ಲ ಸಟೆಗಳನೆನ್ನ, ಮನದಿಂದ ಹೊರಗಿಡುವೆ.

ಎನ್ನ ಹೃದಯ ದೇಗುಲದಿ
ನಿನ್ನ ತಾಣವಿದೆಯೆಂದರಿದು
ಎಲ್ಲ ಕಲ್ಮಷಗಳನಲ್ಲಿಂದ ಅಟ್ಟುತ್ತಿರುವೆ.
ನನ್ನ ನಲ್ಮೆಯನು ಹೂವಿನಲ್ಲಿಡುವೆ.

ನನ್ನ ಮೈಯೊಳಿಹ ಕಸುವು
ನಿನ್ನ ಶಕ್ತಿಯೇ ಎಂದರಿದು

ನಿನ್ನ ಸಾಕ್ಷಾತ್ಕಾರಕೋಸುಗವೆ
ಕ್ರಿಯೆಗೈಯುತಿರುವೆ.

೫

ಕ್ಷಣ ಹೊತ್ತು ನಿನ್ನೊಡನೆ
ಮೈಮರೆತು ಕುಳಿತುಕೊಳಲನುಮತಿಸು
ನನಗಾಗಿ ಕಾದಿರುವ ಕೆಲಸಗಳನು
ಆ ಮೇಲೆ ಮಾಡುವೆನು.

ನಿನ್ನ ಮುಖ ದರುಶನವಿಲ್ಲದಿರೆ
ನನ್ನ ಮನಕಿಲ್ಲ ಶಾಂತಿ.
ನಿನ್ನ ಮುಖ ದರುಶನವಿಲ್ಲದ ನನ್ನ ಶ್ರಮ,
ತೀರವಿಲ್ಲದ ಶ್ರಮಸಾಗರದ ಕೊನೆಯಿರದ ಶ್ರಮವೇ ಆದೀತು.

ತನ್ನ ನಿಟ್ಟುಸಿರು ಮೇಣ್
ಗೊಣಗುವಿಕೆಗಳೊಂದಿಗೆ, ಬೇಸಿಗೆ,
ನನ್ನ ಮನೆಯ ಬಳಿಸಾರಿಹುದಿಂದು.
ಹೂದೋಟದಲಿ ಭ್ರಮರಗಳು
ತಮ್ಮ ಹಾಡ ಹಾಡುತಿಹವು.

ನಿನ್ನೊಡನೆ ಎದುರು ಬದುರಾಗಿ ಕುಳಿತು
ಬದುಕಿಗೆ ನಮ್ಮ ಜೀವನವ ಮೀಸಲಿಡುವ
ಹಾಡ ಹಾಡಲು ಅನುಕೂಲವಾಗಿರುವ
ಪೂರ್ಣ ಬಿಡುವಿನ ನಿಶ್ಚಿಂತೆಯ ಸಮಯವಿದು.

## ೬

ಹರಿದೆತ್ತಿಕೋ ಈ ಹೂವ
ತಡ ಮಾಡದಿರು.
ಇದು ಮುದುಡಿ, ಕೆಳಗುದುರಿ
ಮಣ್ಣುಗೂಡುವ ಭಯವೆನಗೆ

ನಿನ್ನ ಹಾರದಲಿ ಇದಕೆ
ತಾಣವಿರದಿರಬಹುದು
ಆದರೂ, ನಿನ್ನ ಕೈ ಸ್ಪರ್ಶಿಸಿ
ಹರಿವಾಗ ದೊರಕುವ ನೋವೇ ಸಾಕೆನಗೆ.
ನನಗರಿವು ಬರುವ ಮುನ್ನವೇ
ದಿನ ಕಳೆದು ನೈವೇದ್ಯಗೈವ ವೇಳೆ
ಮುಗಿದು ಹೋಗುವ ಭಯವು ನನಗೆ.

ಈ ಹೂವಿಗಿಲ್ಲ ಮನೋಹರ ಬಣ್ಣ
ಮನ ತಣಿಪ ವಾಸನೆ
ಆದರೂ, ಸಮಯ ಸರಿಯುವ ಮುನ್ನ
ಹರಿದೆತ್ತಿಕೋ – ಇದನು
ನಿನ್ನ ಸೇವೆಗಾಗಿ.

೭

ನನ್ನ ಹಾಡು
ಅಲಂಕಾರಗಳನೆಲ್ಲ ಕಳಚಿಹುದು.
ಆಕೆಗಿಲ್ಲ, ಬೆಡಗಿನುಡಿಗೆಯ ಜಂಭ,
ಒಡವೆಗಳು ನಮ್ಮ ಸಂಗಮಕೆ
ತಡೆಯನೊಡ್ಡುವವು ಒಡೆಯ.
ಅವುಗಳ ಝುಣಝುಣದೊಳು
ನಿನ್ನ ಪಿಸುಮಾತುಗಳು, ಮುಳುಗಿ ಹೋಗುವವು

ನನ್ನ ಕವಿಯ ಒಣಡಂಭ
ನಿನ್ನ ನೋಟದಿಂದ ನಾಚಿ ಸಾಯುವದು.
ಓ ಮಹಾಕವಿಯೆ –
ನಿನ್ನಡಿದಾವರೆಗಳಲಿ, ನಾನು ಪವಡಿಸಿಹೆ.
ನಿನ್ನ ಹಾಡಿನಿಂ, ತುಂಬಲು ಯೋಗ್ಯವಾಗುವೊಲು
ಸರಳ ಕೊಳಲನಾಗಿಸು – ನನ್ನ ಬದುಕ.

೮

ಅರಸುಗುವರನ ಬಟ್ಟೆಗಳ ತೊಟ್ಟು
ಕೊರಳೊಳಗೆ ರತ್ನಖಚಿತ
ಚೈನುಗಳ ಧರಿಸಿದ ಮಗುವು,
ಆಟದ ಮೋಜಿನಿಂ ಪೂರ್ಣ ವಂಚಿತ
ಆದರ ಉಡಿಗೆ ತೊಡಿಗೆಗಳೆ ಅದಕೆ ತೊಡಕು

ತನ್ನ ಉಡಿಗೆ ತೊಡಿಗೆಗಳು
ಕೆಡುವ ಭಯದಿಂದ, ಜಗದಿಂದ ದೂರ ಉಳಿದೀತು,
ಆ ಮಗು, ನಡೆದಾಡಲೂ ಹೆದರೀತು.

ಜನ ಸಾಮಾನ್ಯರ ಜೀವನದ ಮಹಾ ಜಾತ್ರೆಗೆ
ಹೋಗಲಡೆತಡೆಯೊಡ್ಡಿದರೆ,
ಬುವಿಯ ಧೂಳಿನ ಧೂಪದಿಂದವನ ದೂರವಿರಿಸಿದರೆ,
ತಾಯೇ,
ಈ ಅಲಂಕಾರದುಡುಗೆಯ ತೊಡಿಗೆಯ ಬಂಧನ,
ನಿನ್ನ ಮಗುವಿಗೆ ಹೊಲ್ಲ.

೯

ಓ ಮೂರ್ಖ, ನಿನ್ನ ಭಾರವ
ನಿನ್ನ ಹೆಗಲ ಮೇಲೆಯೆ ಹೊರುವದೆ?
ಓ ಭಿಕ್ಷುಕ, ನಿನ್ನ ಮನೆಗೇ
ನೀ ಭಿಕ್ಷೆಗೆ ಬರುವುದೇ?

ಎಲ್ಲರ ಭಾರ ಹೊರುವಾತನ ಮೇಲೆ,
ನಿನ್ನೆಲ್ಲ ಭಾರಗಳ ಬಿಟ್ಟು ಬಿಡು.
ಕಳೆದ ದಿನಗಳಿಗಾಗಿ ಮರುಗಬೇಡ.

ನಿನ್ನ ಆಶೆಯ ಉಸಿರು ತಟ್ಟಿ
ದೀಪದ ಬೆಳಕು ನಂದುವದು.

ಆಶೆಯಿಂ ಕಲುಷಿತವಾದ
ನಿನ್ನ ಕೈಗಳಿಂದ ಕೊಡುಗೆಗಳ ಸ್ವೀಕರಿಸದಿರು.
ಪವಿತ್ರ ಪ್ರೇಮದಿಂ,
ನಿನ್ನೆಡೆಗೆ ಬಂದುದನು ಮಾತ್ರ ಸ್ವೀಕರಿಸು.

೧೦

ಎಲ್ಲವನು ಕಳಕೊಂಡ
ಕಡು ಬಡವರಿರುವಲ್ಲಿ
ಕಡು ದಲಿತರಿರುವಲ್ಲಿ
ನೆಲಸಿಹವು ನಿನ್ನ ಪಾದಪದ್ಮ.

ನಿನಗೆ ನಮಿಸಲೋಸುಗ ಬಾಗಿದೊಡೆ,
ಎಲ್ಲವನು ಕಳಕೊಂಡ
ಕಡು ಬಡವರಿರುವಾಳ
ಕಡು ದಲಿತರಿರುವಾಳ
ಮುಟ್ಟಲಾಗದೆ,
ದೊರಕಲಾರವು ನಿನ್ನ ಪಾದಪದ್ಮ.

ಎಲ್ಲವನು ಕಳಕೊಂಡ
ಕಡು ಬಡವರೊಡನೆ
ಕಡು ದಲಿತರೊಡನೆ
ಒಂದಾಗಿ ನಡೆಯುತಿಹ ನಿನ್ನ ದರುಶನವು
ಅಸದಳವು ಈ ನನ್ನ ಅಹಮಿಗೆ.

ಎಲ್ಲವನು ಕಳಕೊಂಡ
ಕಡು ಬಡವರೊಡನೆ
ಕಡು ದಲಿತರೊಡನೆ
ಒಂದಾಗಿ ಇರುತಿರುವ ನಿನ್ನೆಡೆಗೆ ಬರಲು,
ಎಂದಿಗೂ ನನ್ನೆದೆಗೆ ಸಿಗದು ದಾರಿ.

೧೧

ಬಿಟ್ಟು ಬಿಡು ಈ ಮಂತ್ರ, ಈ ಪೂಜೆ
ಈ ಜಪಮಣಿಗಳೆಣಿಕೆ,
ದೇಗುಲದ ಬಾಗಿಲಗಳೆಲ್ಲವನು ಮುಚ್ಚಿ
ಕತ್ತಲೆಯ ಮೂಲೆಯಲಿ ಓರ್ವನೇ ಕುಳಿತು
ಆರ ಪೂಜೆಯನು ಗೈಯುತಿರುವೆ?
ಕಣ್ತೆರೆದು ನೋಡು, ಓ ಭಕುತ,
ನಿನ್ನ ದೇವ ನಿನ್ನೆದುರಿನಲ್ಲಿಲ್ಲ;

ಅವನಿಹನು ಒಕ್ಕಲಿಗ ನೆಲವನುಳುತಿರುವಲ್ಲಿ,
ಅವನಿಹನು ಕಲ್ಕುಟಿಗ ಕಲ್ಲೊಡೆಯುತಿರುವಲ್ಲಿ,
ಅವನಿಹನು ಅವರೊಡನೆ ಬಿಸಿಲಲ್ಲಿ, ಮಳೆಯಲ್ಲಿ
ಅವನ ಉಡಿಗೆಗಳೆಲ್ಲ ಮಿಂದಿಹವು ಧೂಳಿನಲಿ
ಅವನಂತೆಯೇ ನೀನು,
ನಿನ್ನ ಮಡಿಯುಡಿಗೆಗಳ ತೊಡೆದು,
ಧೂಳು ತುಂಬಿದ ಈ ಮಣ್ಣಿಗಿಳಿದು–ಬಾ.

ಮುಕ್ತಿ? ಎಲ್ಲಿಹುದು ಮುಕ್ತಿ?
ನಮ್ಮೊಡೆಯನೇ ಬಲು ಸಂತಸದಿಂ,
ಜಗದ ನಿರ್ಮಾಣ ಕಾರ್ಯದ ಬಂಧನವ
ಕೈಗೆತ್ತಿಕೊಂಡಿರುವ.
ನಮ್ಮೆಲ್ಲರೊಡನೆ ಆತ,
ಅನಂತ ಬಂಧನದಲ್ಲಿರುವ.

ನಿನ್ನ ಧ್ಯಾನದೊಳಗಿಂದ ಎಚ್ಚೆತ್ತು ಬಾ
ಆ ಹೂವು ಆ ಧೂಪ ದೀಪಗಳ ಬಿಟ್ಟು ಬಾ.
ನಿನ್ನ ಮೈ ಮೇಣ್ ತೊಡಿಗೆಗಳು
ಕೊಳೆಯಾದರೇನು? ಹರಿದರೇನು?
ನಿನ್ನ ಹಣೆ ಬೆವರ ಸುರಿಸುತ್ತ
ಶ್ರಮವ ಗೈಯುತ್ತ
ಅವನೊಡನೆ ನಿಲ್ಲು, ಮೇಣ್
ಅವನ ಕಾಣು.

೧೨

ನನ್ನ ಪಯಣಕೆ ಒದಗುವ ವೇಳೆ ಬಹಳ,
ಪಯಣದ ಹಾದಿ ಬಲು ದೂರ.
ಬೆಳಕಿನ ಮೊದಲ ಕಿರಣದ
ರಥದೊಳಗೆ ಬಂದೆ ನಾ.
ವಿಶ್ವದ ಕಾಡುಗಳ ಸುತ್ತಿ

ಎನಿತೋ ಗ್ರಹ ತಾರೆಗಳ ಮೇಲೆ,
ನನ್ನ ಹೆಜ್ಜೆ ಗುರುತುಗಳ ಬಿಟ್ಟಿಹೆನು.

ತನ್ನ ಸನಿಹಕ್ಕೆ ತಾನೆ ಬರಲು,
ಬಲು ದೂರ ದಾರಿಯನು ನಡೆಯ ಬೇಕು.
ಅತಿ ಸರಳ ಪರಿಪೂರ್ಣ ರಾಗವನು ಕಲಿಯಲು,
ಕಠಿಣತಮ ಶಿಕ್ಷಣವ ಪಡೆಯಬೇಕು.

ತನ್ನ ಬಾಗಿಲು ತಾನೆ ತಲುಪಲು,
ಬೇರೆಲ್ಲರ ಬಾಗಿಲುಗಳ ತಟ್ಟಬೇಕು.
ತನ್ನ ಹೃದಯದೊಳಿಹ ಗರ್ಭಗುಡಿಯ
ಕೊಟ್ಟಕೊನೆಗೆ ಮುಟ್ಟಲು,
ಹೊರ ಜಗದ ತುಂಬೆಲ್ಲ ಅಲೆಯಬೇಕು.

ನಾ ಕಣ್ಮುಚ್ಚಿ ''ಇಲ್ಲಿಹೆಯಾ ದೊರೆಯೆ''
ಎಂದುಲಿವ ಮುನ್ನ
ಬಲು ಸಮಯ ಕಣ್ತೆರೆದು ದಣಿಯಬೇಕು.

''ಓಹ್, ಎಲ್ಲಿ?'' ಎಂಬ,
ನನ್ನ ಅಳಲು, ಪ್ರಶ್ನೆಗಳು,
ಕರಗಿ, ಕಣ್ಣೀರಾಗಿ,
ಸಾವಿರ ತೊರೆಗಳಾಗಿ,
''ನಾನಿರುವೆ'' ಎಂಬ,
ನಿನ್ನ ಭರವಸೆ, ಅಭಯಗಳ ಹೊನಲೊಡನೆ ಕೂಡಿ,
ಪ್ರಳಯವಾಗಿ ಈ ಜಗವ ಮುಳುಗಿಸುವವು.

೧೩

ನಾ ಬಯಸಿ ಹಾಡಲು ಬಂದ ಹಾಡು,
ಹಾಡದೇ ಉಳಿದಿಹುದು.

ನನ್ನ ವಾದ್ಯವನು
ಶ್ರುತಿಗೊಳಿಸಿಕೊಳಲಿಕಾಗಿಯೇ,
ನನ್ನೆಲ್ಲ ವೇಳೆ ಕಳೆದಿಹುದು.

ಕವಿ ಸಮಯವಿನ್ನೂ ಕೂಡಿಬಂದಿಲ್ಲ,
ಶಬ್ದಗಳು ಸರಿಯಾಗಿ ಹೊಂದಿಕೊಂಡಿಲ್ಲ,
ಹಾಡಬೇಕೆಂಬ ವೇದನೆಯು ಮಾತ್ರ,
ತುಂಬಿಕೊಂಡಿಹುದು ಹೃದಯದಲ್ಲಿ.

ಮೊಗ್ಗು ಇನ್ನೂ ಅರಳಲಿಲ್ಲ,
ನಿಡಿಸುಯ್ಯುತ್ತ ಗಾಳಿ,
ಸುತ್ತಲೂ ಸುಳಿಯುತಿಹುದು.

ಆತನ ಮೊಗವನಿನ್ನೂ ನೋಡಿಲ್ಲ,
ಆತನ ಧ್ವನಿಯನೂ ಸಹ ಕೇಳಿಲ್ಲ,
ನನ್ನ ಮನೆಯ ಮುಂದಿನ ಹಾದಿಯ ಮೇಲೆ,
ಆತ ನಡೆದಾಡುವ ಕೋಮಲ ಶಬ್ದವನು ಕೇಳಿಹೆನು.

ಆತನಿಗೆ ಆಸನವನಣಿಗೊಳಿಸಲು
ನನ್ನ ಜೀವನವೆಲ್ಲ ಕಳೆದಿಹುದು.

ಆದರೂ ದೀಪವನಿನ್ನೂ ಬೆಳಗಿಸಲಾಗಿಲ್ಲ
ಅಂತಲೇ ಆತನನು ಒಳಗೆ
ಕರೆಯಲಾರದಾಗಿಹೆನು.

ಆತನನು ಕೂಡುವ ಹಿರಿಯಾಸೆಯಲಿ
ಬದುಕುತಿಹೆನು.

೧೪

ಎನ್ನಾಶೆಗಳು ನೂರಾರು, ಅವನು ಪೂರೈಸೆಂದು
ಬಲು ದೈನ್ಯದಲಿ ನಿನ್ನ ಬೇಡುತಿಹೆನು.
ಆದರೆ ನೀನು ನಿರ್ದಯತೆಯಿಂದ ತಿರಸ್ಕರಿಸಿ,
ನನ್ನನು ರಕ್ಷಿಸುತ್ತಿರುವೆ.
ಈ ನಿನ್ನ ಕಠಿಣವಾದ ಕರುಣೆ,
ನನ್ನ ಜೀವಿತದುದ್ದಕ್ಕೂ ಹಾಸುಹೊಕ್ಕಾಗಿಹುದು.

ನಾನು ಕೇಳದೇ ನೀನು ಕೊಡುತಿರುವ,
ಆಗಸ, ಬೆಳಕು, ದೇಹ, ಜೀವ, ಮನಸ್ಸು
ಈ ಸರಳ-ಅದ್ಭುತ ಕೊಡುಗೆಗಳ ಸ್ವೀಕರಿಸಲು,
ದಿನ ದಿನವೂ ನನ್ನನು ಸಜ್ಜುಗೊಳಿಸುತಿರುವೆ.
ಅತಿಯಾದ ಆಶೆಗೆ ಬಲಿಯಾಗದಿರುವಂತೆ ರಕ್ಷಿಸುತಿರುವೆ.

ಒಮ್ಮೊಮ್ಮೆ ಅಲಸಿಯಾಗಿ ವೇಳೆ ಕಳೆದಿಹೆನು
ಒಮ್ಮೊಮ್ಮೆ ಎಚ್ಚೆತ್ತು ನನ್ನ ಗುರಿ ಹುಡುಕಲಿಕ್ಕಾಗಿ

ಗಡಬಡಿಸಿಹೆನು. ಆದರೆ,
ನಿರ್ದಯತೆಯಿಂದ, - ನಿನ್ನ
ದರುಶನ ಭಾಗ್ಯವನೆನಗೆ ಕರುಣಿಸಿಲ್ಲ.

ನನ್ನನು ವಿನಾಶದೆಡೆಗೊಯ್ವ
ಆಶೆಗಳ ಯಾವಾಗಲೂ ತಿರಸ್ಕರಿಸಿ,
ನಿನ್ನನು ಪೂರ್ಣ ಒಪ್ಪಿಕೊಳ್ಳುವೊಲು,
ನನ್ನನು ದಿನದಿನವೂ ಅಣಿಗೊಳಿಸುತಿರುವೆ.

೧೫

ನಿನಗಾಗಿ ಹಾಡ ಹಾಡಲು ನಾನಿರುವೆನಿಲ್ಲಿ.
ಈ ನಿನ್ನ ಭವ್ಯ ಭವನದ ಒಂದು ಮೂಲೆಯಲಿ
ನನ್ನ ತಾಣವಿಹುದು.

ನನ್ನ ನಿರುಪಯುಕ್ತ ಜೀವಕ್ಕೆ
ಕೆಲ ಗುರಿ ರಹಿತ ರಾಗಗಳ ಹೊರಗೆಡುಹುವುದನುಳಿದು
ಈ ನಿನ್ನ ವಿಶ್ವದಲಿ
ಮಾಡಲೆನಗಾವ ಕಾಯಕವೂ ಇಲ್ಲ.

ನಟ್ಟಿರುಳಿನಲಿ ಕಗ್ಗತ್ತಲ ಮಂದಿರದಿ, ನಿನಗೆ,
ಮೌನ ಪೂಜೆಯನು ಸಲಿಪ ಸಮಯ ಬಂದೊಡನೆ,
ಹಾಡ ಹಾಡಲು, ನಿನ್ನೆದುರಿನಲಿ ನಿಲಲು,
ಆಜ್ಞೆಗೈ ನನ್ನೊಡೆಯ!

ಬೆಳಗಿನ ತಂಗಾಳಿಯಲಿ, ಬಂಗಾರದ ಭವ್ಯವಾದ್ಯ
ಶೃತಿಗೊಂಡಾಗ-
ನನ್ನ ಇರುವಿಕೆಯನು ಗುರುತಿಸಿ-ಗೌರವಿಸು ಒಡೆಯ.

೧೬

ಈ ಜಗದ ಜಾತ್ರೆಗೆ ಆಮಂತ್ರಣ ದೊರೆತು,
ನಾನು ಧನ್ಯನಾದೆ.
ನನ್ನ ಕಣ್ಣುಗಳೆಲ್ಲವನು ನೋಡಿದವು,
ನನ್ನ ಕಿವಿಗಳೆಲ್ಲವನು ಕೇಳಿದವು.

ಈ ಉತ್ಸವದೊಳು,
ನನ್ನ ವಾದ್ಯವನು ನುಡಿಸುವದು ನನಗೊಪ್ಪಿಸಿದ ಕೆಲಸ.
ನನಗಿದ್ದ ಯೋಗ್ಯತೆಯಿಂದ, ಪೂರೈಸಿಹೆನದನು.

ಈಗ, ಕೊಟ್ಟಕೊನೆಗೆ,
ಒಳಬಂದು, ನಿನ್ನ ಮೊಗವ ನೋಡಿ,
ನನ್ನ ಮೌನ ನಮನಗಳ ಸಲಿಪ,
ವೇಳೆ ಬಂದಿಹುದೇ? ಎಂದು ಕೇಳುತಿಹೆನು.

೧೭

ಪೂರ್ಣ ನನ್ನನೇ ಕೊಟ್ಟಕೊನೆಗೆ,
ಅವನಿಗರ್ಪಿಸಲು ಬೇಕಾದ ಒಲುಮೆಗಾಗಿ,

ಕಾಯುತಿಹೆನಿಲ್ಲಿ, ಅಂತೆಯೇ ಕರ್ತವ್ಯ ಲೋಪವ ಗೈದ
ಅಪರಾಧಿ ನಾನು.

ತಮ್ಮ ರೀತಿ ನೀತಿಗಳ ಹಗ್ಗ ಗಳಿಂದ,
ನನ್ನ ಬಿಗಿದು ಕಟ್ಟಲಿಕಾಗಿ,
ನನ್ನೆಡೆಗೆ ಬರುವರವರು. ಆದರೆ,
ನಾನು ಅವರಿಂದ ಜಾರಿಕೊಳುವೆ.
ಯಾಕೆನೆ, ಪೂರ್ಣ ನನ್ನನೇ ಅವನಿಗರ್ಪಿಸಲು,
ಬೇಕಾದ ಒಲುಮೆಗಾಗಿ ಕಾಯುತಿಹೆನಿಲ್ಲಿ.

ಜನ ನನ್ನ ಬೈವರು, ಮರುಳನೆಂಬರು,
ಅವರು ಬೈಯಲರ್ಹರೆಂದು ಬಲ್ಲೆ ನಾನು.

ಸಂತೆಯ ಸಮಯ ಮುಗಿದು,
ತಮ್ಮ ಕೆಲಸಗಳನೆಲ್ಲ ಜನ ಪೂರೈಸಿಕೊಂಡಿಹರು.
ನನ್ನ ಕರೆಯ ಬಂದವರು, ಮುನಿಸಿನಲಿ ಮರಳಿ ಹೋಗಿಹರು.
ಪೂರ್ಣ ನನ್ನನೇ ಕೊಟ್ಟಕೊನೆಗೆ ಅವನಿಗರ್ಪಿಸಲು
ಬೇಕಾದ ಒಲುಮೆಗಾಗಿ,
ಕಾಯುತಿಹೆನಿಲ್ಲಿ.

## ೧೮

ಮೋಡಗಳ ಮೋಡಗಳೇರುತಿವೆ
ಕತ್ತಲೆಯು ಹೆಚ್ಚುತ್ತಿಹುದು.

ಆಹ್! ನನ್ನೊಡೆಯ!
ಮನೆಯ ಬಾಗಿಲ ಹೊರಗೆ
ನನ್ನೋರ್ವನನೆ ಏಕೆ ಕಾಯಿಸುತ್ತಿರುವೆ?

ಹಗಲಿನಲಿ ಕೆಲಸದಲಿ
ಜಗದ ಜಂಗುಳಿಯಲಿ, ಕರಗಿ ಹೋಗುವೆನು.
ಈ ಏಕಾಂತ ರಾತ್ರಿಯಲಿ
ನಿನ್ನೊಲವಿಗಾಗಿ ಹಲುಬುತಿಹೆನು.

ನಿನ್ನ ಮೊಗವ ತೋರದಿರೆ
ಬದಿಗೆನ್ನ ತಳ್ಳಿದರೆ
ಈ ಮಳೆ ಸುರಿವ,
ದೀರ್ಘ ರಾತ್ರಿಗಳ ಕಳೆವುದೆಂತೆಂದು
ನಾನರಿಯೆ ನನ್ನೊಡೆಯ.

ದೂರ ದಿಗಂತದ ಮೇಲೆ
ನನ್ನ ನೋಟವು ನಿಂತು
ಚಂಚಲ ಗಾಳಿಯೊಡಗೂಡಿ
ನನ್ನ ಹೃದಯ ತೊಳಲಾಡುತಿಹುದು.

೧೯

ನೀನುಲಿಯಲೊಲ್ಲದಿರೆ,
ನಿನ್ನ ಮೌನವನೆ ಎದೆಯೊಳಗೆ ತುಂಬಿಟ್ಟುಕೊಂಡು

ಸಹಿಸಿಕೊಳುವೆ. ಮೊಗವ ತಗ್ಗಿಸಿ,
ತೀಕ್ಷ್ಣ ದೃಷ್ಟಿಯಲಿ ಅವಲೋಕಿಸುವ
ಗಾಢಾಂಧಕಾರದ ಸ್ತಬ್ದ ರಾತ್ರಿಯೊಲು, ಸಂಯಮದಿಂದಿರುವೆ.

ಬೆಳಗು ಬಂದೇಬಹುದು, ಕತ್ತಲಳಿಯದೆ ಇರದು
ಆಗಸವು ಒಡೆದು,
ಬಂಗಾರದ ಕಿರಣಗಳೋಪಾದಿಯಲಿ
ಸುರಿಯ ತೊಡಗುವದು
ನಿನ್ನೊಲವಿನುಲಿಯ ಅಮೃತಧಾರೆ.

ಆಗ -
ನನ್ನೆದೆಯೊಳಗಿನ ಪ್ರತಿಯೊಂದು ಗೂಡಿನಿಂದ
ನಿನ್ನ ಮಾತುಗಳು,
ಹಾಡಿನ ಹಕ್ಕಿಗಳಾಗಿ ಹಾರತೊಡಗುವವು.
ಎನ್ನೆದೆಗಾಡಿನ ಮರಗಳ ಗುಂಪುಗಳೊಳಗಿಂದ
ನಿನ್ನ ರಾಗಗಳು,
ಹೊರಹೊಮ್ಮ ತೊಡಗುವವು.

## ೨೦

ನಾ ದಾರಿತಪ್ಪಿ ಅಲೆಯುತಿರುವಾಗ,
ಕಮಲವರಳಿತ್ತು - ಆಹ್!
ನನ್ನ ಹೂಬುಟ್ಟಿ ಬರಿದಾಗಿದ್ದರೂ,
ಕಮಲವನು ನಾ ಗಮನಿಸದಾದೆ.

ಈಗ ಎನ್ನೆದೆಯನು ದುಃಖವಾವರಿಸಿ
ತೆಂಕಣ ಗಾಳಿಯ ಸೋಜಿಗದ ವಾಸನೆಯಲಿ,
ಸಿಹಿಯ ಕಣಗಳನು ಗ್ರಹಿಸುತಿಹೆನು.

ಈ ಅಸ್ಫುಟ ಸಿಹಿಯ ಮರುತನೆನ್ನೆದೆಯಲಿ,
ವೇದನಾಭರಿತ ದಾಹವನು ತುಂಬಿಹುದು.
ತನ್ನ ಪರಿಪೂರ್ಣತೆಗೆ ಹವಣಿಸುವ
ಶಿಶಿರ ಋತುವಿನ ಉತ್ಸುಕ ಉಸುರಿನಂತೆ,
ಭಾಸವಾಗುತ್ತಿಹುದು.

ಇದು ಇನಿತು ಸನಿಹವಿದೆಯೆಂದು,
ಇದು ನನ್ನದೇ ಎಂದು,
ಇದು ಎನ್ನ ಹೃದಯದಾಳದೊಳಗರಳಿದ,
ಪರಿಪೂರ್ಣ ಸಿಹಿಯೆಂದು,
ನಾನರಿತಿರಲಿಲ್ಲ.

೨೧

ನನ್ನ ದೋಣಿಯನೀಗ ನೀರಿಗಿಳಿಸಲೆ ಬೇಕು.
ನನ್ನ ನಿಸ್ತೇಜ ಕ್ಷಣಗಳು, ಅಯ್ಯೋ,
ದಡದ ಮೇಲೆಯೇ ಕಳೆಯುತಿಹವಲ್ಲ!

ವಸಂತ ತನ್ನ ಹೂಗಳನರಳಿಸಿ, ಸರಿದು ಹೋಗಿಹನು.
ಈಗ, 

ಬಾಡಿದ, ನಿರುಪಯುಕ್ತ ಹೂಗಳ ಭಾರದಿಂದ
ನಾನು ಕುಳಿತಿರುವೆನಿಲ್ಲಿ.

ನೀರಿನಲೆಗಳು ಗಲಿಬಿಲಿಸುತಿಹವು.
ದಂಡೆಯ ದಟ್ಟಡವಿಯ ನೆರಳಿನಲಿ,
ಪೀತ ವರ್ಣದ ಎಲೆಗಳು,
ಕಂಪಿಸುತ ಬೀಳುತಿಹವು.

ಯಾವ ತೆರವಿನ ಮೇಲೆ,
ನಿನ್ನ ದೃಷ್ಟಿಯ ನೆಟ್ಟು ನೋಡುತಿರುವೆ?
ದೂರದ, ಆ ದಡದ, ರಾಗಗಳ ಹೊತ್ತು,
ಹರಿದು ಬರುತಿಹ ಗಾಳಿ,
ಪುಳಕವ ತರುತಿಲ್ಲವೆ ನಿನಗೆ?

೨೨

ಶ್ರಾವಣದ ಮಳೆಯ ದಟ್ಟ ನೆರಳಿನಲಿ
ಎಲ್ಲರ ಕಂಗಳ ತಪ್ಪಿಸಿ,
ಗುಪ್ತ ಹೆಜ್ಜೆಗಳನಿಟ್ಟು
ಮೌನದಲಿ ಬರುವ
ಇರುಳಿನೊಲು ಬರುವೆ ನೀನು.

ಈ ದಿನದ ಮುಂಜಾವು,
ಮೂಡಣ ಗಾಳಿಯು ಮೊರೆಯನು ತಳ್ಳಿ,

ತನ್ನ ಕಂಗಳನು ಮುಚ್ಚಿಕೊಂಡಿಹುದು.
ಸದಾ ಜಾಗೃತಿಯಲಿರುವ, ನೀಲ ಆಗಸದ ಮೇಲೆ,
ಮೋಡಗಳ ದಪ್ಪನೆಯ ಹೊದಿಕೆಯಾಗಿಹುದು.

ಕಾಡುಗಳು ತಮ್ಮ ಹಾಡುಗಳ ನಿಲ್ಲಿಸಿಹವು.
ಎಲ್ಲ ಮನೆಗಳ ಬಾಗಿಲುಗಳು ಮುಚ್ಚಿಹವು.
ಈ ನಿರ್ಜನ ನೀರಸ ಬೀದಿಯಲಿ,
ನೀನೋರ್ವನೆ ದಾರಿಹೋಕ.
ಓಹ್! ನನ್ನೊಡೆಯ, ನನ್ನೋರ್ವನ ಗೆಳೆಯ,
ನನ್ನ ಮನೆಯ ಬಾಗಿಲುಗಳು ತೆರೆದಿಹವು.
ಕನಸಿನಂದದಿ ಬಂದು ಮಾಯವಾಗದಿರು.

೨೩

ಈ ಬಿರುಗಾಳಿಯ ರಾತ್ರಿಯಲಿ ಓರ್ವನೇ
ಒಲವಿನ ತಾಣಕೆ ಹೊರಟಿಹೆಯಾ ನನ್ನೊಡೆಯ?
ನಿರಾಶೆಯಲಿ, ಮೊರೆಯಿಡುವವರಂದದಲಿ
ಆಗಸವು ನರಳುತಿಹುದು.

ಈ ರಾತ್ರಿ ನಿದ್ರೆ ನನ್ನ ಬಳಿ ಸುಳಿಯುತಿಲ್ಲ,
ಆಗಾಗ ಎದ್ದೆದ್ದು ಬಾಗಿಲನು ತೆರೆದು,
ನಿನ್ನ ಬರುವಿಕೆಗಾಗಿ ಕತ್ತಲೆಡೆಗೆ ನೋಡುತಿಹೆನು.

ನನ್ನೆದುರು ನನಗೇನೂ ಕಾಣುತ್ತಲಿಲ್ಲ,
ನಿನ್ನ ದಾರಿ ಎಲ್ಲಿಹುದೋ ಎಂಬ ಸೋಜಿಗವು ನನಗೆ.

ಆವ ಕಪ್ಪು ನದಿಯ ದಡದಿಂದ,
ಆವ ದಟ್ಟಡವಿಯ ದೂರದ ತುದಿಯಿಂದ,
ದಿಗ್‌ಭ್ರಮೆಗೊಳಿಸುವ ಆವ ಖಿನ್ನತೆಯ ಆಳದಿಂದ,
ನನ್ನೆಡೆಗೆ ಬರುವ ನಿನ್ನ ಮಾರ್ಗವು,
ಹೊರಟಿಹುದು ಒಡೆಯ?

೨೪

ದಿನವು ಮುಗಿದಿಹುದಾದರೆ,
ಹಕ್ಕಿಗಳ ಹಾಡು ನಿಂತಿಹುದಾದರೆ,
ಮರುತನೋಡೋಡಿ ದಣಿದಿಹನಾದರೆ,
ನಿದ್ದೆಯ ಚದ್ದರದಿ ಈ ಬುವಿಯ ಹೊಚ್ಚುವೊಲು,
ಕೋಮಲದ ಕಮಲ ದಳಗಳನು,
ದಪ್ಪನೆಯ ಮುಚ್ಚಂಜೆಯಲಿ ಮುಚ್ಚುವೊಲು,
ಕಪ್ಪನೆಯ ಹೊದಿಕೆಯನು ಹೊಚ್ಚೆನ್ನ ಮೇಲೆ.

ತಾಣ ಸೇರುವ ಮುನ್ನ
ಸರಕುಗಳೆಲ್ಲವು ಮುಗಿದು,
ಉಡಿಗೆಗಳು ಹರಿದು, ಶಕ್ತಿಯಳಿದು,
ಬಸವಳಿದ ಪಯಣಿಗನ
ಅವಮಾನವನು ದಾರಿದ್ರ್ಯವನು, ಕಳೆದು,
ನಿನ್ನ ಕರುಣೆ ತುಂಬಿದ, ರಾತ್ರಿಯ ಹೊದಿಕೆಯಲಿ,
ಹೂವಿಗೀಯ್ವಂತೆ, ಅವಗೆ ಹೊಸ ಜೀವನವನೀಯು.

೨೫

ಈ ದಣಿದ ರಾತ್ರಿಯಲಿ
ಎಲ್ಲ ಹೋರಾಟವ ಬಿಟ್ಟು,
ನಿನ್ನ ಮೇಲ್ನಂಬುಗೆಯನಿಟ್ಟು,
ನಿದ್ರೆಗೆ ಶರಣಾಗುವೆ.

ನಿನ್ನ ಪೂಜೆಗಣಿಮಾಡು ಎಂದು
ನನ್ನ ದಣಿದ ಮನಕೆ, ಒತ್ತರಿಸಲಾರೆ.

ದಣಿದ ಹಗಲಿನ ಕಂಗಳ ಮೇಲೆ,
ಇರುಳಿನ ಕರುಣೆಯ ಪರದೆಯನೆಳೆದು,
ಹೊಸ ಜಾಗೃತಿಯ ಆನಂದದಲಿ
ಮರು ದೃಷ್ಟಿಯನೀಯುವಾತ
ನೀನಲ್ಲದೆ ಮತ್ತಾರು?

೨೬

ಒಡೆಯನು ಬಂದು,
ಬದಿಯಲಿ ಕುಳಿತಾಗ,
ನಾನೇಳಲಿಲ್ಲ,
ಎಂತಹ ಶಾಪದ ನಿದ್ದೆ !
ಓಹ್! ದುರ್ದೈವವೆ !

ತನ್ನ ವಾದ್ಯದೊಡನೆ
ರಾತ್ರಿಯ ನೀರವತೆಯಲಿ ಬಂದನಾತ.
ಆತನ ವಾದ್ಯದ ನಾದದ ಇಂಪಿನೊಡನೆ,
ನನ್ನ ಕನಸುಗಳು ಅನುರಣಿಸಿದವು.

ಏಕಿಂತು ನನ್ನಿರುಳುಗಳು
ಕಳೆದು ಹೋದವು? ಅಯ್ಯೋ!
ನನ್ನ ನಿದ್ದೆಯನು,
ಆತನುಸಿರು ಮುಟ್ಟುತಿರುವಾಗ,
ಆಹ್!
ನಾನೇಕೆ ಒಡೆಯನನು ಕಾಣದಾದೆ !

೨೭

ಬೆಳಕು, ಓಹ್, ಎಲ್ಲಿಹುದು ಬೆಳಕು?
ಹೊತ್ತುರಿವ ಆಶೆಯಿಂದ ಹೊತ್ತಿಸದನು.

ದೀಪವಿದೆ ಆದರದನು ಹೊತ್ತಿಸುವರಿಲ್ಲ,
ಇಂತಿಹುದೆ ನಿನ್ನ ದೈವ?
ಆಹ್, ಹೃದಯ,
ಸಾವೇ ಇದಕಿಂತಲೂ ಮಿಗಿಲು.

ದುಃಖ, ನಿನ್ನ ಬಾಗಿಲನು ತಟ್ಟುತಿಹುದು.
ಕೇಳವಳ ಸಂದೇಶ,

ನಿನ್ನೊಡೆಯನೆಚ್ಚೆತ್ತು, ನಿನಗಾಗಿ ಕಾದಿಹನು.
ಇರುಳಿನಂಧಕಾರವ ದಾಂಟಿ,
ಪ್ರೇಮದಾಣಕೆ ಬಾ, ಎಂದು ಕರೆಯುತಿಹನು.

ಆಗಸವು ಮೇಘಾಚ್ಛಾದಿತವಾಗಿ,
ಸೋನೆ ಸುರಿಯುತಿಹುದು.
ಎನ್ನದೆಯ ಕಲಕುತಿಹುದೇನು? ಇದರರ್ಥವೇನು?
ನಾನರಿಯದಾಗಿಹೆನು.

ಒಂದು ಚಣದ ಬೆಳಕಿನ ಹೊಳಪು,
ಕಂಗಳಿಗೆ ಕತ್ತಲೆಯ ತಂದು,
ನಟ್ಟಿರುಳಿನಲಿ ತೇಲಿ ಬರುತಿಹ,
ಆ ರಾಗದ, ತಾಣದ ದಾರಿಯನು, ಹುಡುಕಲು,
ಎನ್ನೆದೆಯು, ತಡಕಾಡತೊಡಗುವದು.

ಬೆಳಕು, ಓಹ್, ಎಲ್ಲಿಹುದು ಬೆಳಕು?
ಹೊತ್ತುರಿವ ಆಶೆಯಿಂದ ಹೊತ್ತಿಸದನು.
ಗುಡುಗು ಮಿಂಚುಗಳಾರ್ಭಟವು ಮೇರೆ ಮೀರಿಹುದು.
ತೆರವಿನೊಳಗಿಂದ ತೂರಿ ಬರುತಿಹುದು ಬಿರುಗಾಳಿ.
ಕಪ್ಪು ಕಲ್ಲಿನಂದದಿ ಕತ್ತಲಾಗಿದೆ ರಾತ್ರಿ.
ಹೃದಯವನು ಕಲಕುತಿಹ ಈ ಚಣಗಳು,
ಕತ್ತಲಲಿ ಕರಗಿ ಹೋಗದಿರಲಿ.
ನಿನ್ನ ಜೀವನದುಸಿರಿನಿಂದಲೇ
ನಿನ್ನೊಲ್ಲವಿನ ದೀಪವನು ಹೊತ್ತಿಸು.

## ೨೮

ಹಟಮಾರಿಯಾಗಿವೆ ಬಂಧನಗಳು
ಆದರೂ, ಅವನು ತೊಡೆಯಲೋಸುಗ
ಉದ್ಯುಕ್ತನಾದೊಡೆ – ನನ್ನ ಎದೆ ನೋಯುವದು.
ಮುಕ್ತಿ ಒಂದೇ ನಾನರಸುತಿಹ ವಸ್ತು
ಆದರೂ, ಅದಕಾಗಿ ಆಶಿಸಲು ನಾಚುತಿರುವೆ.

ನಾ ಬಲ್ಲೆ ನಿನ್ನೊಳಿದೆ ಅಪರಿಮಿತ ಸಂಪತ್ತು
ಮೇಣ್, ನೀನೆನ್ನ ಜೀವದ ಗೆಳೆಯ, ಆದರೂ,
ಹೃದಯವನು ತುಂಬಿರುವ ಚಿಲ್ಲರೆ ಚೂರುಗಳ
ಹೊರಗೆಸೆವ ಮನವಿಲ್ಲ ನನಗೆ.

ನನಗೆ ಹೊದಿಕೆಯಾಗಿಹ ಬಟ್ಟೆ
ಮಣ್ಣಿನ ಬಟ್ಟೆ, ಸಾವಿನ ಬಟ್ಟೆ
ನಾನು ದ್ವೇಷಿಸುವೆನದನು
ಆದರೂ, ಮೋಹದಿಂದ ತೆಕ್ಕೈಸುವೆ

ನನ್ನ ಋಣ ಭಾರ ದೊಡ್ಡದು, ಸೋಲುಗಳು ಅಸಂಖ್ಯ
ನಾಚಿಕೆಯು ಗೌಪ್ಯ ಮೇಣ್ ಭಾರ, ಆದರೂ,
ನನ್ನೊಳಿತಿಗಾಗಿ ನಿನ್ನಡಿಗೆ ಬಂದಾಗ
ನನ್ನ ಬೇಡಿಕೆಗಳನು, ನೀ ಪೂರೈಸಬಹುದೆಂಬ
ಭಯದಿಂದ ನಡುಗುವೆನು.

೨೯

ನನ್ನ ಹೆಸರಿನೊಳು ನಾನಾರನು ಮುಚ್ಚಿರುವೆನೋ
ಆತನಳುತಿಹನು ಬಂದಿಯಾಗಿ.
ಅದರ ಪರಿವೆ ಇರದೆ, ನಾನು
ಸುತ್ತಲೂ ಗೋಡೆಗಳ ನಿರ್ಮಿತಿಯಲಿ ನಿರತನಾಗಿಹೆನು.
ಗೋಡೆಗಳೆತ್ತರೆತ್ತರಕೇರಿದಂತೆ
ಅವುಗಳ ಕಪ್ಪು ನೆರಳಿನಲಿ
ನನ್ನ ನಿಜ ರೂಪವು, ಮರೆಯಾಗುತಿಹುದು.

ನಾ ಕಟ್ಟಿದ ಗೋಡೆಗಳ ಮೇಲೆ ಗರ್ವ ನನಗೆ.
ಅವು ಮುಕ್ಕಾಗದೊಲು,
ಮರಳು ಮಣ್ಣುಗಳ ಅಂಟುಲೇಪನವ ಮೆತ್ತುತ್ತಿರುವೆ.
ಇಂಥ, ಗಮನ ಶ್ರದ್ಧೆಗಳಿಂದಾಗಿ
ನನ್ನ ನಿಜ ರೂಪ, ನನ್ನ ದೃಷ್ಟಿಯಿಂದ ಮರೆಯಾಗುತಿಹುದು.

೩೦

ನನ್ನ ತಾಣದೆಡೆ ಪಯಣಕ್ಕೆ
ನಾನೋರ್ವನೆ ಹೊರಟೆ, ಆದರೆ,
ಈ ನಿಶ್ಶಬ್ದ ರಾತ್ರಿಯಲಿ
ನನ್ನ ಬೆಂಬತ್ತಿರುವವರಾರು?
ಅವನ ತಪ್ಪಿಸಲೆಂದು ನಾನು ಬದಿಗಾಗುವೆ,
ಆದರೆ, ಅದು ವ್ಯರ್ಥ ಯತ್ನ

ತನ್ನ ಜಂಭದ ನಡೆಯಿಂದ, ಧೂಳನೆಬ್ಬಿಸುತಿಹನು.
ನಾನುಲಿವ ಪ್ರತಿಯೊಂದು ಶಬ್ದಕ್ಕೂ,
ತನ್ನ ದೊಡ್ಡ ದನಿಯ ಸೇರಿಸುತಿಹನು.

ಇವನು, ಅಲ್ಪನಾಗಿಹ ನನ್ನ ಅಹಮು, ನನ್ನೊಡೆಯ,
ಇವಗಿಲ್ಲ ನಾಚಿಕೆ, ಆದರೆ,
ಇವನೊಡನೆ ನಿನ್ನ ಬಾಗಿಲಿಗೆ ಬರಲು,
ನನಗೆ ನಾಚಿಕೆ.

೩೧

''ಬಂದಿ, ಹೇಳು, ನಿನ್ನ ಬಂಧಿಸಿದವರಾರು?''
''ನನ್ನೊಡೆಯನೆನ್ನ ಬಂಧಿಸಿಹನು'' ಎಂದನು ಬಂದಿ.

''ಸಂಪತ್ತಿನಲಿ ಅಧಿಕಾರದಲಿ
ಜಗದೊಳೆಲ್ಲರನೂ ಮೀರಿಸಲೆಂದು
ನನ್ನ ದೊರೆಯ ಧನವನ್ನು
ನಾನೇ ಕೂಡಿಹಾಕಿದೆ.
ನಿದ್ರೆ ಬಂದಾಗ ನನ್ನ ದೊರೆಗೆ ಮೀಸಲಾಗಿಹ
ಮಂಚದ ಮೇಲೆ, ನಾನೇ ಒರಗಿದೆ.
ನಿದ್ರೆ ತಿಳಿದೆದ್ದಾಗ,
ನನ್ನ ಕೋಣೆಯೊಳಗೆ
ನಾ ಬಂದಿಯಾಗಿದ್ದುದ ಕಂಡೆ''.

"ಬಂದಿ ಹೇಳು—
ನಿನ್ನ ಕಟ್ಟಿರುವ ಮುರಿಯಲಾಗದಿಹ
ಕಬ್ಬಿಣದ ಈ ಸರಪಳಿಯ ಮಾಡಿದವರಾರು?"

"ನಾನು" ಎಂದನು ಬಂದಿ.
"ಇದನು ಬಹು ಜಾಗರೂಕತೆಯಿಂದ
ನಾನೇ ಮಾಡಿಹೆನು.
ನನ್ನ ಶಕ್ತಿಯಿಂದ, ಜಗವೆಲ್ಲವ ಹಿಡಿದಿಟ್ಟೊಡೆ,
ನಾನು ಸ್ವತಂತ್ರನಾಗುವೆನೆಂದು ತಿಳಿದು,
ಹಗಲಿರುಳು ದುಡಿದು,
ದೊಡ್ಡ ಬೆಂಕಿಯಲಿ ಪುಟಕಿಟ್ಟು,
ಬಲವಾದ ಏಟುಗಳ ಕೊಟ್ಟು,
ಈ ಸರಪಳಿಯ ಹೆಣೆದೆ.
ಹೆಣೆಗೆಯ ಜೋಡಣೆಯು ಪೂರ್ತಿಯಾದಾಗ,
ಕೆಲಸ ಮುಗಿದಾಗ,
ಸರಪಳಿಯು ನನ್ನನೇ ಬಂದಿಸಿಹುದ ಕಂಡೆ".

೩೨

ಈ ಸಂಸಾರದಲಿ, ನನ್ನ ಪ್ರೀತಿಸುವವರು
ನಾ ತಪ್ಪಿಸಿಕೊಳ್ಳದೊಲು, ನನ್ನ ಹಿಡಿದಿಡಲು
ಎಲ್ಲ ರೀತಿಯಲಿ ಶ್ರಮಿಸುತಿಹರು
ಆದರೆ, ಅವನ ಪ್ರೇಮಕ್ಕಿಂತಲೂ,

ನೂರ್ಮಡಿಯಾಗಿಹ ನಿನ್ನ ಪ್ರೇಮದಿಂದ,
ನನ್ನನೇ ಸ್ವತಂತ್ರನಾಗಿಸಿಹೆ.

ಅವರ ನಾ ಮರೆಯದಂತಿರಲು,
ನನ್ನೊಬ್ಬನನೆ ಬಿಡರವರು.
ದಿನಗಳುರುಳಿದವು, ಆದರೆ,
ನಿನ್ನ ದರ್ಶನವಿಲ್ಲ.

ಪ್ರಾರ್ಥನೆಯಲಿ ನಿನ್ನ ನಾ
ಕರೆಯದಿದ್ದರೂ ಸಹ,
ಎನ್ನ ಹೃದಯದೊಳು, ನಿನ್ನ
ಇರಿಸದಿದ್ದರೂ ಸಹ,
ನನ್ನ ಮೇಲಿನ ನಿನ್ನ ಪ್ರೇಮ,
ನನಗಾಗಿ ಕಾಯುತಿಹುದು.

೩೩

ಹಗಲಿನೊಳು ನನ್ನ
ಮನೆಯೊಳಗೆ ಬಂದು
ಇಂತೆಂದರವರು –
''ಸ್ವಲ್ಪವೇ ಜಾಗೆಯನು ತೆಗೆದುಕೊಳ್ಳುವೆವು.
ನೀ ಪೂಜೆಗೈವಾಗ, ನಿನಗೆ ಸಹಕರಿಸುವೆವು.
ನಮ್ಮ ಪಾಲಿಗೆ ಬರುವ

ಪ್ರಸಾದವನು ಮಾತ್ರ ಕೊಳ್ಳುವೆವು''.
ನಂತರ ಮೂಲೆಯಲಿ, ನಮ್ರತೆಯಿಂದ ಕುಳಿತರವರು.

ಆದರೆ, ರಾತ್ರಿಯ ಅಂಧಕಾರದಲಿ
ಪ್ರಬಲ ದಂಗೆಯ ಗೈದು,
ತಮ್ಮ ಅಪವಿತ್ರ ಆಶೆಯಿಂದ,
ಗದ್ದುಗೆಯ ಮೇಲಿದ್ದ ನೈವೇದ್ಯವನು,
ಕಿತ್ತುಕೊಂಡರವರು.

೩೪

ನಿನ್ನನುಳಿದು ನನ್ನದೆನಲು
ನನ್ನೊಳೇನೂ ಉಳಿಯದಿರಲಿ.

ನನ್ನ ಸುತ್ತ ನಿನ್ನ ಗ್ರಹಿಸಿ,
ಸಕಲದಲ್ಲಿ ನಿನ್ನೆಡೆಗೆ ಪರಿದು,
ಅನುಚಣವು ನನ್ನ ನಲ್ಮೆಯು,
ನಿನಗೆ ಅರ್ಪಿತವಾಗುವೊಲು,
ನನ್ನ ಇಚ್ಛೆಯಂಬುದೇನೂ
ಉಳಿಯದಿರಲಿ ನನ್ನೊಳು.

ನಿನ್ನ ಮರೆಮಾಚುವದು
ಅಶಕ್ಯವಾಗುವೊಲು,
ನನ್ನದೆಂಬುದೇನೂ ಉಳಿಯದಿರಲಿ ನನ್ನೊಳು.

ನಿನ್ನ ಇಚ್ಛೆಯ ಬಂಧನವನುಳಿದು,
ಬೇರೆ ಬಂಧನಗಳಳಿಯಲಿ.
ನನ್ನ ಬದುಕಿನಲ್ಲಿ ನಿನ್ನ
ಇಚ್ಛೆ ಪ್ರಕಟಗೊಳ್ಳಲಿ.
ಅದುವೆ ನಿನ್ನ ನಲ್ಮೆಯ ಬಂಧನ.

೩೫

ಮನಕೆ ಅಳುಕಿರದಲ್ಲಿ, ತಲೆ ಎತ್ತಿ ಇರುವಲ್ಲಿ
ಜ್ಞಾನಕ್ಕೆ ತಡೆಯಿರದಲ್ಲಿ

ಮನೆ ಮನೆಯ ಗೋಡೆಗಳಿಂದ ಕೊರೆಯಲ್ಪಟ್ಟು
ಹರಿದು ಹಂಚಿ, ಸಂಕುಚಿತವಾಗಿರದೆ ಜಗವು ಹರವಾಗಿರುವಲ್ಲಿ

ಸತ್ಯದಾ ಆಳದಿಂ ನುಡಿಗಳೇಳುತಿರುವಲ್ಲಿ

ದಣುವನರಿಯದ ಹವಣಿಕೆಯು
ಪರಿಪೂರ್ಣತೆಗೆ ಕೈ ಚಾಚುತಿರುವಲ್ಲಿ

ಕೊಳೆತ ರೂಢಿಯ ಮರುಳುಗಾಡಿನಲಿ
ವಿವೇಚನೆಯ ತಿಳಿಯಾದ ಝರಿಯು ತಡವರಿಸಿರದಲ್ಲಿ

ದಿನದಿನಕೆ ಹರವಾಗುತಿಹ ಚಿಂತನ ಮೇಣ್ ಕ್ರಿಯೆಯ
ಮಾರ್ಗದಲಿ
ಮನವ ನೀ ಮುಂಬರಿಸುತಿರುವಲ್ಲಿ

ಆ ಸ್ವಾತಂತ್ರ್ಯದ ಸ್ವರ್ಗದಲಿ
ಎಚ್ಚರಿಯಲೆನ್ನ ತಾಯ್ನಾಡು ಓ ಎನ್ನ ತಂದೆ.

೩೬

ಬರುವ ಸುಖ ದುಃಖಗಳ
ಹಗುರಾಗಿ ಭರಿಸಲು
ನನ್ನ ಪ್ರೇಮವನು ಸೇವೆಯಲಿ
ಸಾರ್ಥಕವಾಗಿಸಲು·
ಕಡು ಬಡವನನು ಕಡೆಗಣಿಸಿದಂತಿರಲು
ಮತ್ತೆ ಸ್ವಾರ್ಥ ಬಲವಂತನೆದುರಂಜಿ
ಮುದುಡದಿರಲು,

ದಿನ ನಿತ್ಯದ ಅಲ್ಪ ವಿಷಯಗಳಿಂದ
ನನ್ನ ಮನವ ಮೇಲೆತ್ತಲು,
ನನ್ನ ಶಕ್ತಿಯನೆಲ್ಲ ಪ್ರೇಮದಿಂ,
ನಿನ್ನಿಚ್ಛೆಗರ್ಪಿಸಲು,

ನಿನ್ನ ದಿವ್ಯಶಕ್ತಿಯನು
ನೀಡೆನಗೆ ದೇವನೆ.
ಬರಿ ಬಯಕೆಗಳ ತುಂಬಿ
ಕಡು ದಾರಿದ್ರ್ಯದಲ್ಲಿದೆ ಹೃದಯ,
ಬಡತನದ ಬೇರಿಗೆ ಕೊಡು ಏಟನೊಂದು.

ಇದೆ ನನ್ನ ಪ್ರಾರ್ಥನೆಯು.
ಇದೆ ನನ್ನ ಪ್ರಾರ್ಥನೆಯು.

೩೭

ನನ್ನ ಮುಂದಿನ ಪಥವು ಮುಚ್ಚಿ,
ನನ್ನ ಸರಕುಗಳೆಲ್ಲ ಸವೆದು,
ನನ್ನ ಶಕ್ತಿಯು ಕೊನೆಯ ಹಂತವ ತಲುಪಿ,
ನನ್ನ ಪಯಣವು ಕೊನೆಗೊಂಡಿತೆಂದು ತಿಳಿದೆ.
ನಿಶ್ಶಬ್ದ ಅಜ್ಞಾತದಲಿ, ಆಸರೆ ಪಡೆವ ಸಮಯ
ಐತಂದಿತೆಂದು ತಿಳಿದೆ.

ಆದರೆ,
ನನ್ನೊಳಿಹ ನಿನ್ನ ಇಚ್ಛೆಗೆ ಕೊನೆಯಿಲ್ಲ ಒಡೆಯ!
ನನ್ನ ನಾಲಿಗೆಯ ಮೇಲಿನ ಹಳೆಯ ಶಬ್ದಗಳು ಸವೆದಾಗ,
ಹೃದಯದೊಳಗಿಂದ ಹೊಸ ಹಾಡುಗಳು
ಹೊರಹೊಮ್ಮತೊಡಗುವವು.
ಎಲ್ಲಿ ಹಳೆಯ ದಾರಿಗಳು ಕೊನೆಗೊಂಡಿಹವೋ,
ಅಲ್ಲಿಯೇ, ತನ್ನೆಲ್ಲ ವಿಸ್ಮಯದೊಡನೆ
ಹೊಸ ಜಗಂಗಳು ತೆರೆದುಕೊಳ್ಳುವವು.

## ೩೮

''ನೀನು ಬೇಕೆನಗೆ-ನೀನೊಬ್ಬನೇ ಬೇಕೆನಗೆ''
ಎಂದು,
ಕೊನೆಯಿಲ್ಲದೊರಲುತಿರಲಿ ನನ್ನ ಹೃದಯ.
ಹಗಲಿರುಳು ಮುತ್ತುತಿಹ,
ನನ್ನ ದಾರಿಯನು ತಪ್ಪಿಸುತಿಹ,
ನನ್ನೆಲ್ಲ ಆಶೆಗಳು - ಬರಿಪೊಳ್ಳು, ಜೊಳ್ಳು.

ಕತ್ತಲಿನ ನಟ್ಟಿರುಳು ತನ್ನೆದೆಯೊಳು,
ಬೆಳಕಿನ ಬೇಡಿಕೆಯನಿರಿಸಿಕೊಂಡಿರುವೊಲು,
ನನ್ನ ಸುಪ್ತ ಮನಂತರಂಗದೊಳಗಿಂದ,
ಒರಲುತಿಹುದೊಂದು ಧ್ವನಿಯು.
''ನೀನು ಬೇಕೆನಗೆ-ನೀನೊಬ್ಬನೇ ಬೇಕೆನಗೆ''.

ತನ್ನೆಲ್ಲ ಶಕ್ತಿಯಲಿ
ಶಾಂತತೆಗಪ್ಪಳಿಸುವ ಬಿರುಗಾಳಿಯು,
ಶಾಂತಿಯೊಳಗೇ ತನ್ನ ಕೊನೆಯನರಸುವೊಲು,
ನನ್ನ ಬಂಡಾಯದ ಮನಸು,
ನಿನ್ನ ಪ್ರೇಮದ ಮೇಲಪ್ಪಳಿಸಿ,
ಒರಲುತಿಹುದು.
''ನೀನು ಬೇಕೆನಗೆ-ನೀನೊಬ್ಬನೇ ಬೇಕೆನಗೆ''.

೩೯

ಹೃದಯ ಒಣಗಿ ಕಠಿಣವಾದಾಗ,
ಎನ್ನ ಮೇಲೆ ಕರುಣೆಯ ಮಳೆಯಗರೆಯೈತಂದೆ.

ಜೀವನದ ಸೊಬಗಡಗಿ, ಉತ್ಸಾಹ ಹೋದಾಗ,
ಪುಟಪುಟಿವ ಹಾಡಾಗಿ ನನ್ನೆಡೆಗೆ ಬಾರೈ.

ನಿತ್ಯಕೃತ್ಯದ ತುಮುಲ ಗೊಂದಲವೆದ್ದು
ಆಚೆಯ ಅತೀತವೆನಗೆ ಮುಚ್ಚಿದಾಗ,
ಓ ದಿವ್ಯಮೌನದೊಡೆಯನೆ,
ನಿನ್ನ ಶಾಂತಿ ಪ್ರಸನ್ನತೆಯೊಡನೆ,
ನನ್ನೆಡೆಗೆ ಬಾರೈ

ನನ್ನ ರಿಕ್ತ ಹೃದಯದೊಳು,
ತಿರುಪೆಯ ಮನಸು, ಕುಗ್ಗಿ, ಕುಳಿತಾಗ,
ಬಾಗಿಲನು ಮುರಿದು, ರಾಜ ವೈಭವದೊಡನೆ,
ಬಿಂಕದಲಿ ಬಾ ದೊರೆಯೆ.

ಆಶೆ ಬೆಳೆದೆದ್ದು,
ಮೋಹದ ಕೊಳೆಯಿಂದ,
ಮನದ ಕಂಗಳ ಕುರುಡುಗೈದಾಗ,
ಓ ಜಾಗೃತ ಚಿತ್ತದ ಪರಮ ಪವಿತ್ರನೇ,
ನಿನ್ನ ಸಿಡಿಲು ಬೆಳಕುಗಳೊಡನೆ,
ನನ್ನೆಡೆಗೆ ಬಾರೈ.

## ೪೦

ಎನ್ನ ಬರ ಹೊಡೆದ ಹೃದಯದೊಳು
ಮಳೆ ಬರದೆ, ಎನಿತೆ ದಿನಗಳುರುಳಿಹೋಗಿಹವು.
ಎನ್ನೆದೆಯ ಆಗಸವು,
ಭಯವ ಹುಟ್ಟಿಸುವಂದದಲಿ ಬೆತ್ತಲಾಗಿಹುದು.
ಒಂದು ತೆಳು ಬಿಳಿ ಮುಗಿಲೂ ಅಲ್ಲಿಲ್ಲವಲ್ಲ!
ಎಲ್ಲಾದರೊಂದು ಕಡೆ,
ತಂಪೀವ ಮಳೆ ಬೀಳ್ವ,
ಸಣ್ಣ ಸೂಚನೆಯೂ ಇಲ್ಲ.

ಸಾವಿನೋಪಾದಿಯಲಿ ಕಪ್ಪಾಗಿಹ,
ನಿನ್ನ ಕೋಪದ ಬಿರುಗಾಳಿಯ ಕಳುಹಿಸೈ ದೊರೆಯೆ.
ಅಂಚಿನಿಂದಂಚಿಗೂ, ನಿನ್ನ ಮಿಂಚಿನ ಸೆಳಕ ಝುಳಪಿಸಿ,
ಆಗಸವನಲುಗಿಸು ನನ್ನೊಡೆಯ,
ನಾನದನು ಸಹಿಸಬಲ್ಲೆ.

ಆದರೆ, ಮನಕೊರೆವ, ಎದೆಸುಡುವ,
ಸುತ್ತೆಲ್ಲ ಪಸರಿಸುವ,
ಈ ಭೀಕರ ಬೇಗೆಯ,
ಹಿಂತೆಗೆದುಕೋ ನನ್ನೊಡೆಯ.

ತಂದೆ ಕಡು ಕೋಪವ ತಾಳಿದ ದಿನದಂದು,
ಮಾತೆಯ ಹನಿದುಂಬಿದ ಕಣ್ಣುಗಳಂತೆ

ಕರುಣೆ ತುಂಬಿದ ಮೋಡ
ಮೇಲಿನಿಂದಿಳಿಬೀಳಲಿ.

೪೧

ಅವರೆಲ್ಲರ ಹಿಂದೆ, ಕಪ್ಪನೆಯ ನೆರಳಿನಲಿ,
ಎಲ್ಲಿ ಅಡಗಿಕೊಂಡಿರುವೆ ನನ್ನೊಡೆಯ?
ಧೂಳು ತುಂಬಿದ ದಾರಿಯಲಿ, ನಿನ್ನ ಕಡೆಗಣಿಸಿ, ತಳ್ಳಿ,
ಮುನ್ನಡೆವರವರು.
ಕಾಣಿಕೆಗಳನೆಲ್ಲ ಹರವಿಕೊಂಡು, ನಿನಗಾಗಿ
ಎನಿತೋ ಬಳಲಿಸುವ ಘಳಿಗೆಗಳಿಂದ, ಕಾಯುತಿಹೆನಿಲ್ಲಿ,
ದಾರಿಗರು ಒಂದೊಂದು ಹೂವನೆತ್ತಿಕೊಂಡು,
ನನ್ನ ಕಾಣಿಕೆಯ ಬುಟ್ಟಿ ಬರಿದಾಗಬಂದಿಹುದು.

ಮುಂಜಾವು ಮಧ್ಯಾಹ್ನಗಳೆರಡೂ ಸರಿದಿಹವು.
ದಣಿದ ಸಂಜೆಯಲಿ ನಿದ್ರೆಯ ಜೋಂಪಿನಿಂದ,
ನನ್ನ ಕಂಗಳು ಭಾರವಾಗಿಹವು. ದಾರಿಹೋಕರು,
ನನ್ನೆಡೆಗೆ ನೋಡಿ ನಗಲು, ನಾಚಿಕೆಯಿಂದ ತುಂಬುವುದೆನ್ನ
ಮನವು.
ತನ್ನುಡುಪನೇ ತನ್ನ ಮೊಗದ ಮೇಲೆಳೆದುಕೊಂಡು,
ಕುಳಿತ ಭಿಕ್ಷುಕಿಯೊಲು,
ನಿನಗಾಗಿ ಕಾಯುತ್ತ ಕುಳಿತಿರುವೆನಿಲ್ಲಿ.

''ಏನು ಬೇಕಿದೆ ನಿನಗೆ'' ಎಂದವರು ನನ್ನ ಕೇಳುವರು.
ನಾನುತ್ತರಿಸಲಾರೆ-ಕಣ್ಮುಚ್ಚಿ ಮೌನ ತಳೆವೆ.

ಓಹ್! ಹೇಗೆ ಹೇಳಲಿ ನಾನು, ಆ ದಾರಿಗರಿಗೆ?
ನಾನು ಕಾಯುತಿಹುದು, ನಿನಗಾಗಿ ಎಂದು, ಮೇಣ್,
ನೀನೆನಗೆ ವಚನವಿತ್ತಿಹೆ ಎಂದು.
ನನ್ನ ಕಡು ಬಡತನವ ನಿನಗೆ ದಕ್ಷಿಣೆಯಾಗಿರಿಸಿಹೆನೆಂದು,
ನಾಚಿಕೆಯ ಬಿಟ್ಟು, ಹೇಗೆ ಹೇಳಲಿ ನಾನು?
ಈ ನನ್ನ ಅಭಿಮಾನವನು, ನನ್ನ ಹೃದಯಾಂತರಾಳದಲಿ,
ಗೌಪ್ಯದಲಿ ಅಪ್ಪಿಕೊಳುತಿಹೆನು.

ಹಸಿರು ಹುಲ್ಲಿನ ಮೇಲೆ ಕುಳಿತು,
ನೀಲ ಗಗನದೆಡೆ ನೋಡುತ್ತ
ನಿನ್ನ ಬರುವಿಕೆಯ ವೈಭವದ ಕನಸ ಕಾಣುವೆನಿಂತು -
''ಕಣ್ಣು ಕೋರೈಸುವ ಬೆಳಕಿನೊಳಗಿಂದ,
ಹೊಂಬಣ್ಣದ ಧ್ವಜ ಹಾರುತಿರಲು,
ಬಂದಿಳಿವುದು ನಿನ್ನ ರಥ.
ದಾರಿಯ ಇಕ್ಕೆಲಗಳಲಿ ನಿಂತು,
ಬೆರಗುಗಂಗಳಿಂದೆಲ್ಲರೂ ನೋಡುತಿರಲು,
ನಿನ್ನಾಸನದಿಂದಿಳಿದು ಬಂದು,
ಬೇಸಿಗೆಯ ಗಾಳಿಯಲಿ ನಲುಗುತಿಹ ಬಳ್ಳಿಯೊಲು,
ನಾಚಿಕೆ ಅಭಿಮಾನಗಳಿಂದ ನಲುಗುತಿಹ ನನ್ನನು,
ದಾರಿಯ ಧೂಳಿನೊಳಗಿಂದೆತ್ತಿ
ನಿನ್ನ ಪಕ್ಕದಲ್ಲಿರಿಸಿಕೊಳ್ಳುವೆ'',

ಆದರೆ, ವೇಳೆ ಸರಿಯುತಿಹುದು.
ನಿನ್ನ ರಥದ ಗಾಲಿಗಳ ಶಬ್ದವೇ ಕೇಳದಾಗಿಹುದು.
ಎನಿತೋ ಮೆರವಣಿಗೆಗಳಿಲ್ಲಿಂದ ಸಾಗುತಿಹವು.
ಅವೆಲ್ಲವುಗಳ ಹಿಂದೆ, ನೆರಳಿನಲಿ,
ಮೌನದಲಿ ನಿಂತಿರುವಾತ, ನೀನಲ್ಲವೇ ನನ್ನೊಡೆಯ?
ನಿನಗಾಗಿ ಮೊರೆಯಿಡುತ,
ದಣಿದ ಹೃದಯದೊಳು, ವ್ಯರ್ಥ ಹಂಬಲವ ಹೊತ್ತು
ಇಲ್ಲಿ ನಿಂತಿರುವಾತ ನಾನೋರ್ವನೇ ಇಹೆನೆ?

೪೨

ನಸುಕಿನಲಿ ಕಿವಿಮಾತನೊಂದ ಕೇಳಿದೆನು –
'ನಾನು ನೀನಿಬ್ಬರೇ ನೌಕೆಯಲಿ ಪಯಣಿಸುವುದು –
ಇದು ಕೊನೆಯಿರದ ಪಯಣ, ಅನಂತ ಯಾತ್ರೆ,
ಈ ಜಗದೊಳಾರಿಗೂ ತಿಳಿದಿರದು ಇದರ ಸುಳಿವು'

ಈ ತೀರವಿರದಬ್ಧಿಯೊಳು,
ನಿನ್ನ ಮೌನ ಮುಗುಳು ನಗೆಯದುರು,
ಶಬ್ದ ಪದಗಳ ಬಂಧನವ ಕಳಚಿ,
ಸಾಗರದ ಸ್ವಚ್ಛಂದ ತೆರೆಗಳೊಲು,
ಉಬ್ಬುವವು ನನ್ನ ಹಾಡುಗಳು, ದಿವ್ಯ ಗಾನವಾಗಿ.

ಆ ಸಮಯವಿನ್ನೂ ಬಂದಿಲ್ಲವೇ ನನ್ನೊಡೆಯ?
ಆ ಪಯಣವಣಿಗೊಳಲು ಇನ್ನೂ ಕೆಲಸವುಳಿದಿಹುದೆ?

ನೋಡು, ಈ ಕಡಲತೀರದ ಮೇಲೆ,
ಸಂಜೆ, ಕಾಲಿರಿಸಿಹುದಾಗಲೆ,
ಮಂಕಾಗುತಿಹ ಬೆಳಕಿನಲಿ,
ಕಡಲ ಹಕ್ಕಿಗಳು ಗೂಡ ಸೇರುತಿಹವು.

ಸೂರ್ಯಾಸ್ತದ ಕೊನೆಯ ಕಿರಣದ ಹೊಳಪು,
ಕತ್ತಲೆಯ ಸೇರಿ, ಮಾಯವಾಗುವೊಲು,
ಬಂಧನವು ಕಡಿದು, ಈ ನೌಕೆ,
ಎಂದು ಮರೆಯಾಗುವುದೋ, ಬಲ್ಲವರಾರು?

೪೩

ನಿನ್ನ ಸ್ವಾಗತಕೆ ನಾನು ಸನ್ನದ್ಧವಿರದಾಗ,
ಓ ನನ್ನ ದೊರೆಯೇ,
ಎನಿತೋ ಜಾರಿ ಮರೆಯಾಗುವ ಚಣಗಳಲಿ,
ಸಾಮಾನ್ಯ ಜನಜಂಗುಳಿಯಲೊಬ್ಬನಾಗಿ,
ಎನಗರಿವಿಲ್ಲದೇ, ಎನ್ನದೆಯ ಒಳಹೊಕ್ಕು,
ಅಸಂಖ್ಯ ಅನಂತದ ಮುದ್ರೆಗಳನೊತ್ತಿಹೆಯಲ್ಲ!

ಇಂದು ಆಕಸ್ಮಿಕದಿ ಅವುಗಳ ಮೇಲೆ ಬೆಳಕು ಬಿದ್ದಾಗ,
ಅಲ್ಲಿ, ನಿನ್ನ ಅಂಕಿತವ ಕಂಡೆ.
ನನ್ನ ಮರೆತು ಹೋದ ದಿನಗಳ,
ಸುಖ ದುಃಖಗಳ ನೆನಪುಗಳ ಧೂಳಿನಲಿ ಕಲೆತು,

ನಿನ್ನ ಮುದ್ರೆಯ ಹೊತ್ತ ಕಣಗಳು,
ಎಲ್ಲೆಡೆ ಚಲ್ಲರಿದು ಬಿದ್ದಿಹವು.

ಧೂಳಿನಲಿ ನನ್ನ ಬಾಲಿಶ ಆಟಗಳ ನೋಡಿ,
ಅಸಡ್ಡೆಯಲಿ ನೀನು ಹಿಂತಿರುಗಲಿಲ್ಲ.
ನನ್ನ ಆಟದ ಕೋಣೆಯಲಿ,
ನಾ ಕೇಳಿದ ಹೆಜ್ಜೆಗಳ ಸಪ್ಪಳವೇ,
ನಕ್ಷತ್ರದಿಂ, ನಕ್ಷತ್ರಕ್ಕೆ ಪ್ರತಿಧ್ವನಿಸುತಿಹುದು.

೪೪

ನೆಳಲು ಬೆಳಕ ಬೆಂಬತ್ತುವದನು,
ಬೇಸಿಗೆಯಲಿ ಮಳೆ ಸುರಿವುದನು,
ಹಾದಿಬದಿಯಲಿ ಕುಳಿತು ನೋಡುತ್ತ
ನಿನಗಾಗಿ ಕಾಯುವದು,
ಸಂತಸದ ಕೆಲಸವೆನಗೆ.

ನಾವರಿಯದ ಗಗನದಿಂದ,
ಸುದ್ದಿಗಳ ತರುವ ಹರಿಕಾರರು,
ನನಗಭಿವಂದಿಸಿ ವೇಗದಲಿ ತೆರಳುವರು.
ಆಗ ನಲಿವುದೆನ್ನ ಹೃದಯ.
ಸುಳಿಯುತಿಹ ಮಾರುತನು ಆಹ್ಲಾದವನೀವ.

ಮುಂಬೆಳಗಿನಿಂ ಮುಚ್ಚಂಜೆಯವರೆಗೆ,
ನನ್ನ ಮನೆ ಬಾಗಿಲ ಮುಂದೆ ಕಾಯುತ್ತ ಕುಳಿತಿರುವೆ.

ನಾ ಬಲ್ಲೆ ದೊರೆಯೇ,
ನಿನ್ನನು ನೋಳ್ಪ ಸಂತಸದ ಚಣವು,
ಥಟ್ಟನೇ ಬಂದೊದಗುವದು ನನಗೆ.

ಆ ತನಕ ನಾನೋರ್ವನೇ,
ನಗುವೆ ಹಾಡ ಹಾಡುವೆ.
ಆ ವೇಳೆಯಲಿ, ಈ ಗಾಳಿಯಲಿ,
ಭರವಸೆಯ ಕಂಪು, ತುಂಬಿ ಸೂಸುವದು.

೪೫

ಆತನ ಹೆಜ್ಜೆಗಳ ಮೌನ ಶಬ್ದವನು, ನೀವು ಕೇಳಿಲ್ಲವೆ?
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ಎಸತೋ ಮನದ ಭಾವನೆಗಳ,
ಎನಿತೋ ಹಾಡುಗಳನಾಗಿ ರಚಿಸಿ ಹಾಡ್ದಿಹೆನು,
ಆದರೆ, ಅವೆಲ್ಲ ಹೇಳುವುದೊಂದೇ –
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ಫಾಲ್ಗುಣದ ಬಿಸಿಲು ತುಂಬಿದ,
ನರುಗಂಪಿನ ದಿನಗಳಲಿ,
ಕಾಡಿನೆಡೆಯಿಂದ,
ಆತ ಬರುತಿಹನು, ಬರುತಿಹನು ಅನುಚಣವು ಬರುತಿಹನು.

ಶ್ರಾವಣದ ಮಳೆಯ ಕಪ್ಪು ರಾತ್ರಿಯಲಿ,
ಸಿಡಿಲ್ಹೊಡೆವ ಮೋಡಗಳ ರಥದ ಮೇಲೆ,
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ನನ್ನ ಪ್ರತಿಯೊಂದು ದುಃಖದಲಿ,
ಆತನ ಹೆಜ್ಜೆಗಳು ನನ್ನೆದೆಯ ಮುಟ್ಟುತಿಹವು.
ಆತನ ಪಾದದ ಬಂಗಾರದ ಸ್ಪರ್ಶವು,
ನನ್ನಾನಂದವನು ಹೊಳೆವಂತೆ ಮಾಳ್ಪುದು.

೪೬

ಆವ ಅನಂತದೆಡೆಯಿಂದ,
ನೀನು ನನ್ನೆಡೆಗೆ ಬರುತಲಿಹೆಯೋ, ನಾನರಿಯೆ, ನನ್ನೊಡೆಯ.
ನಿನ್ನ ರವಿ ಚಂದ್ರ ತಾರೆಗಳು, ಎಂದೆಂದಿಗೂ,
ಮುಚ್ಚಲಾರವು ನಿನ್ನ, ನನ್ನ ದೃಷ್ಟಿಯಿಂದ.

ಎನಿತೋ ಮುಂಜಾವು ಸಂಜೆಗಳಲಿ,
ನಿನ್ನ ಹೆಜ್ಜೆಗಳ ಸಪ್ಪಳವು ಕೇಳಿಹುದು.
ನಿನ್ನ ದೂತ, ಎನ್ನ ಹೃದಯಾಂತರಂಗದಲಿ ಬಂದು,
ಕರೆದಿಹನು ನಿನ್ನೆಡೆಗೆ ಗೌಪ್ಯದಲಿ.

ನಾನರಿಯೆ ನನ್ನೊಡೆಯ,
ಏಕಿಂತು ಬದುಕಿಂದು ಸಂಭ್ರಮಿಸುತಿಹುದು?
ಹೃದಯದೊಳು ಇಂದೇಕೆ ರೋಮಾಂಚನ?

ನಾ ಬಲ್ಲೆ ದೊರೆಯೇ,
ನಿನ್ನನು ನೋಳ್ಪ ಸಂತಸದ ಚಣವು,
ಥಟ್ಟನೇ ಬಂದೊದಗುವದು ನನಗೆ.

ಆ ತನಕ ನಾನೋರ್ವನೇ,
ನಗುವೆ ಹಾಡ ಹಾಡುವೆ.
ಆ ವೇಳೆಯಲಿ, ಈ ಗಾಳಿಯಲಿ,
ಭರವಸೆಯ ಕಂಪು, ತುಂಬಿ ಸೂಸುವದು.

೪೫

ಆತನ ಹೆಜ್ಜೆಗಳ ಮೌನ ಶಬ್ದವನು, ನೀವು ಕೇಳಿಲ್ಲವೆ?
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ಎನಿತೋ ಮನದ ಭಾವನೆಗಳ,
ಎನಿತೋ ಹಾಡುಗಳನಾಗಿ ರಚಿಸಿ ಹಾಡಿಹೆನು,
ಆದರೆ, ಅವೆಲ್ಲ ಹೇಳುವುದೊಂದೇ –
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ಫಾಲ್ಗುಣದ ಬಿಸಿಲು ತುಂಬಿದ,
ನರುಗಂಪಿನ ದಿನಗಳಲಿ,
ಕಾಡಿನೆಡೆಯಿಂದ,
ಆತ ಬರುತಿಹನು, ಬರುತಿಹನು ಅನುಚಣವು ಬರುತಿಹನು.

ಶ್ರಾವಣದ ಮಳೆಯ ಕಪ್ಪು ರಾತ್ರಿಯಲಿ,
ಸಿಡಿಲ್ಬೊಡೆವ ಮೋಡಗಳ ರಥದ ಮೇಲೆ,
ಆತ ಬರುತಿಹನು, ಬರುತಿಹನು, ಅನುಚಣವು ಬರುತಿಹನು.

ನನ್ನ ಪ್ರತಿಯೊಂದು ದುಃಖದಲಿ,
ಆತನ ಹೆಜ್ಜೆಗಳು ನನ್ನೆದೆಯ ಮುಟ್ಟುತಿಹವು.
ಆತನ ಪಾದದ ಬಂಗಾರದ ಸ್ಪರ್ಶವು,
ನನ್ನಾನಂದವನು ಹೊಳೆವಂತೆ ಮಾಳ್ಪುದು.

೪೭

ಆವ ಅನಂತದೆಡೆಯಿಂದ,
ನೀನು ನನ್ನೆಡೆಗೆ ಬರುತಲಿಹೆಯೋ, ನಾನರಿಯೆ, ನನ್ನೊಡೆಯ.
ನಿನ್ನ ರವಿ ಚಂದ್ರ ತಾರೆಗಳು, ಎಂದೆಂದಿಗೂ,
ಮುಚ್ಚಲಾರವು ನಿನ್ನ, ನನ್ನ ದೃಷ್ಟಿಯಿಂದ.

ಎನಿತೋ ಮುಂಜಾವು ಸಂಜೆಗಳಲಿ,
ನಿನ್ನ ಹೆಜ್ಜೆಗಳ ಸಪ್ಪಳವು ಕೇಳಿಹುದು.
ನಿನ್ನ ದೂತ, ಎನ್ನ ಹೃದಯಾಂತರಂಗದಲಿ ಬಂದು,
ಕರೆದಿಹನು ನಿನ್ನೆಡೆಗೆ ಗೌಪ್ಯದಲಿ.

ನಾನರಿಯೆ ನನ್ನೊಡೆಯ,
ಏಕಿಂತು ಬದುಕಿಂದು ಸಂಭ್ರಮಿಸುತಿಹುದು?
ಹೃದಯದೊಳು ಇಂದೇಕೆ ರೋಮಾಂಚನ?

ಕೆಲಸವೆಲ್ಲವ ಮುಗಿಸಿ, ಹೊರಟೇಳುವ ಸಮಯ
ಬಂದತೆರನಂತೆ ಭಾಸವಾಗುತ್ತಲಿದೆ.
ನಿನ್ನ ಮಧುರ ಅಸ್ತಿತ್ವದ ಅಸ್ಪಷ್ಟ ವಾಸನೆಯು,
ಈ ಗಾಳಿಯಲಿ ಇರುವುದನು ಅನುಭವಿಸುತಿಹೆನು.

೪೭

ನಿನ್ನ ಬರುವಿಕೆಗಾಗಿ ವ್ಯರ್ಥದಲಿ ಕಾಯುತ್ತ
ರಾತ್ರಿ ಪೂರ್ತಿ ಕಳೆಯುತ್ತ ಬಂದಿಹುದು.
ದಣಿವಿನಿಂ, ಜಾವದಲಿ, ನಿದ್ದೆ ಹೋದಾಗ,
ಎಲ್ಲಿ ಬಂದು ಬಿಡುವನೋ ಆತ,
ಎಂಬ ಭಯವೆನಗೆ.
ಆಹ್! ಸಖರೇ,
ಆತನ ಬರುವಿಕೆಗೆ, ತಡೆಯಾಗದೊಲು,
ತೆರೆದಿಡಿರಿ ದಾರಿಯನು.

ನಿಮಗೊಂದು ಬಿನ್ನಹವು –
ಆತನ ಹೆಜ್ಜೆ ಸಪ್ಪಳವು, ನನ್ನನೆಚ್ಚರಿಸದಿರೆ,
ನೀವೆನ್ನನೆಚ್ಚರಿಸದಿರಿ.
ಮುಂಜಾವಿನ ಬೆಳಕಿನ ಹಬ್ಬದಲಿ,
ಹೊರಡುವ ಹಕ್ಕಿಗಳ ಕಲರವ, ಮೇಣ್,
ಸ್ವೇಚ್ಛೆಯಿಂ ಚರಿಸುವ ಗಾಳಿಯಿಂದ,
ನಾನೆಚ್ಚರಗೊಳಲಿಚ್ಛಿಸೆನು

ಮನೆಬಾಗಿಲಿಗೆ, ನನ್ನೊಡೆಯನು, ಥಟ್ಟನೇ
ಬಂದರೂ ಸಹ, ನನ್ನನೆಚ್ಚರಿಸದೆ, ನಿದ್ದೆಯಲ್ಲಿರಲು ಬಿಡಿ.

ಆಹ್! ನನ್ನ ನಿದ್ರೆ, ಅಮೂಲ್ಯ ನಿದ್ರೆ,
ಆತನ ಸ್ಪರ್ಶಮಾತ್ರದಿಂದಲೇ ಮಾಯವಾಗಲು ಕಾಯುತಿಹುದು.
ನನ್ನ ನಿದ್ರೆಯ ಕತ್ತಲಿನೊಳಗಿಂದೇಳುವ ಸ್ವಪ್ನದಂತೆ,
ಆತನೆನ್ನೆದುರು ನಿಂತು, ಮುಗುಳುನಕ್ಕಾಗ,
ಹೊರಡುವ ಬೆಳಕಿಗೆ ನನ್ನ ಕಣ್ಣೆವೆಗಳು, ತೆರೆದುಕೊಳ್ಳುವವು.

ಎಲ್ಲ ಬೆಳಕಿಗೂ ಮೊಟ್ಟಮೊದಲಿನ ಬೆಳಕಾಗಿ,
ಎಲ್ಲ ರೂಪಗಳಿಗೂ ಮೊಟ್ಟಮೊದಲಿನ ರೂಪವಾಗಿ,
ನನ್ನ ದೃಷ್ಟಿಗೆ ಆತ ಗೋಚರಿಸಲಿ.
ನನ್ನ ಜಾಗೃತ ಮನಸಿಗೆ ಆನಂದದ ಪುಳಕ,
ಮೊಟ್ಟಮೊದಲು ಆತನ ನೋಟದಿಂದಲೇ ಬರಲಿ.
ನನ್ನೆಡೆಗೇ ನನ್ನ ಹೊರಳುವಿಕೆಯು,
ತಕ್ಷಣವೇ, ಆತನೆಡೆಗಿನ ಹೊರಳುವಿಕೆಯಾಗಲಿ.

೪೮

ಮುಂಜಾವಿನ ಶಾಂತ ಸಾಗರದ ಮೌನವು ಮುರಿದು,
ಹಕ್ಕಿಗಳ ಕಲರವವು ಹೊರಹೊಮ್ಮಿದಾಗ,
ಹಾದಿಬದಿಯಲಿ ಹೊಚ್ಚಹೊಸ ಹೂಗಳು ನಗುತಲಿರುವಾಗ,
ಮೋಡಗಳ ಸಂದಿನೊಳಗಿಂದ ಬಂಗಾರದ ಸಂಪತ್ತು
ಹೊರಸೂಸುತಿರುವಾಗ,

ಅವನೆಲ್ಲ ಗಮನಿಸದೆ,
ನಮ್ಮ ಮಾರ್ಗದಲಿ ನಾವು ಹೊರಟು ನಡೆದೆವು.

ಹರುಷದ ಹಾಡ ಹಾಡಲಿಲ್ಲ ನಾವು.
ವಸ್ತು ವಿನಿಮಯ ವ್ಯಾಪಾರಕ್ಕಾಗಿ ಹಳ್ಳಿಗೆ ಹೋಗಲಿಲ್ಲ.
ಒಂದು ಶಬ್ದವನೂ ಆಡಲಿಲ್ಲ, ಒಂದು ಮುಗುಳ್ನಗು ನಗಲಿಲ್ಲ.
ಒಂದು ಚಣ ದಾರಿಯಲಿ ವಿಶ್ರಮಿಸಲಿಲ್ಲ.
ದಿನಗಳೆದಂತೆ ಧಾವಂತ ಹೆಚ್ಚಿ
ವೇಗವನು ಹೆಚ್ಚಿಸಿ ನಡೆದು ಹೊರಟೆವು.

ನೇಸರನಾಗಸದ ಮಧ್ಯಕೇರಿ, ಮರದ ನೆರಳಲ್ಲಿ,
ಹಕ್ಕಿಗಳು ಕೂಗುಟ್ಟಿದವು.
ತರಗೆಲೆಗಳು ಬಿಸಿಲ ಗಾಳಿಯಲಿ ತೇಲಾಡಿ
ಅತ್ತಿತ್ತ ನರ್ತಿಸಿದವು
ದನಗಾಹಿ, ಆಲದ ಮರದ ನೆರಳಿನಲಿ,
ಜೋಂಪಿನ ಮಂಪರಿನಲಿ ಕನಸ ಕಾಣುತಲಿಹನು.
ನೀರಿನ ಬದಿಯ ಹುಲ್ಲಿನಲಿ ಕುಳಿತು,
ದಣಿದ ಮೈನೀಡಿ ಕೈಕಾಲು ಚಾಚಿದೆನು.

ನನ್ನ ಜೊತೆಯವರು ಅಪಹಾಸ್ಯದಿಂದ, ನಕ್ಕರೆನ್ನೆಡೆಗೆ.
ತಮ್ಮ ತಲೆಎತ್ತಿ, ಲಗುಬಗೆಯಲಿ ನಡೆದು ಹೋದರು.
ಅವರು ಹೊರಳಿ ನೋಡಲಿಲ್ಲ, ವಿಶ್ರಾಂತಿ ಪಡೆಯಲಿಲ್ಲ.
ಎನಿತೋ ಹುಲ್ಲುಗಾವಲುಗಳ, ಗುಡ್ಡ ಬೆಟ್ಟಗಳ
ಕಡೆಹಾಯ್ದು ಅಪರಿಚಿತ ದೇಶ ಪ್ರದೇಶಗಳ

ದಾಟಿ, ಮಾಯವಾದರು ದೂರದ ನೀಲದಲಿ.
ಕೊನೆಯಿರದ ದಾರಿಯನು ನಡೆಯುತಿಹ
ವೀರ ಪಯಣಿಗರೇ, ನಿಮಗೆನ್ನ ಗೌರವಪೂರ್ಣ ನಮನ.
ಅಪಹಾಸ್ಯ ತೆಗಳಿಕೆಗಳು ಚುಚ್ಚಿ
ನನ್ನನೇಳಿಸಲು ಯತ್ನಿಸಿದವು, ಆದರೆ, ನಾನು
ಪ್ರತಿಕ್ರಿಯಿಸಲಿಲ್ಲ,
ಮಂದ್ರ ಬೆಳಕಿನ ಛಾಯೆಯಲಿ, ದೈನ್ಯ ಸ್ಥಿತಿಯ ಆನಂದದ ಆಳದಲಿ,
ನನ್ನನೇ ನಾ ಕಳೆದುಕೊಂಡೆ.

ನನಗೆ ವಿಶ್ರಾಂತಿಯನು ಕೊಟ್ಟ, ಹೊನ್ನ ಕಿರಣಗಳ, ಕಸೂತಿ
ತುಂಬಿದ ಹಸಿರು, ಮೆಲ್ಲಮೆಲ್ಲನೆ, ನನ್ನ ಹೃದಯಕೂ ಹಬ್ಬಿತು.
ನಾನೇಕೆ ಪಯಣಿಸಿದೆನೆಂಬುದನೆ ಮರೆತೆ.
ಹೋರಾಟವೆಲ್ಲವ ಬಿಟ್ಟು, ದಿಗ್‌ಭ್ರಮೆಗೊಳಿಸುವ
ಛಾಯೆಗಳಿಗೆ, ಹಾಡುಗಳಿಗೆ, ಶರಣಾದೆ.

ಕೊಟ್ಟಕೊನೆಗೆ, ನಿದ್ದೆತಿಳಿದೆದ್ದು ಕಣ್ಣು ತೆರೆದಾಗ,
ನಿನ್ನ ಮುಗುಳ್ನಗೆಯಿಂದ, ನನ್ನ ನಿದ್ರೆಯ ಮೇಲೆ,
ಬೆಳಕಿನ ಹೊನಲು ಹರಿಸುತ್ತ,
ನೀನು ನಿಂತುದ ಕಂಡೆ ನನ್ನೊಡೆಯ.
ನಿನ್ನ ಸೇರುವ ದಾರಿ,
ಎನಿತು ಕಠಿಣ, ಎನಿತು ದೂರ, ಎಂದು,
ನಾನೆನಿತು ಭಯ ಹೊಂದಿದ್ದೆ!

೪೯

ನಿನ್ನ ಸಿಂಹಾಸನವನಿಳಿದು, ಎನ್ನ ಗುಡಿಸಲಿಗೆ ಬಂದೆ.
ಗುಡಿಸಲಿನ ಮೂಲೆಯಲಿ ನಾನೋರ್ವನೇ ಕುಳಿತು,
ಹಾಡುತ್ತಲಿದ್ದೆ. ನನ್ನ ಹಾಡಿನ ಇಂಪು, ನಿನ್ನ ಮನ ಮುಟ್ಟಿ
ಸಿಂಹಾಸನವನಿಳಿದು, ಎನ್ನ ಗುಡಿಸಲಿಗೆ ಬಂದೆ.

ನಿನ್ನ ಆಸ್ಥಾನದಲಿ ಎನಿತೋ ಗಾನ ಪಂಡಿತರಿಹರು.
ಎಲ್ಲ ಕಾಲದಲೂ ಅವರು ಹಾಡ ಹಾಡುತಿಹರು.
ಆದರೆ, ಈ ಹೊಸಬನ ಸರಳ ಕೀರ್ತನೆ,
ನಿನ್ನ ನಲ್ಮೆಯನು ತಟ್ಟಿಹುದು.
ಒಂದು ದುಃಖದ ಸಣ್ಣ ಸೆಳೆತ,
ಜಗದ ಮಹಾ ಸಂಗೀತದೊಡಗೂಡಿ, ನಿನ್ನ ಮನವ ಮುಟ್ಟಿ
ನನಗೆ ಬಹುಮಾನವೆಂದು, ಹೂವೊಂದ ಹಿಡಿದು,
ನಿನ್ನ ಸಿಂಹಾಸನದಿಂದಿಳಿದು,
ಎನ್ನ ಗುಡಿಸಲಿನ ಬಾಗಿಲಿಗೆ ಬಂದು ನಿಂತಿರುವೆ.

೫೦

ಬಾಗಿಲಿನಿಂ, ಬಾಗಿಲಿಗೆ ಭಿಕ್ಷೆಯನೆತ್ತುತ್ತ
ಹಳ್ಳಿಯ ದಾರಿಯಲಿ ನಡೆದಾಗ,
ನನ್ನ ಭವ್ಯ ಕನಸಿನಲಿ ಕಾಣುವೊಲು,
ಸ್ವುವರ್ಣ ರಥವು, ದೂರದಲಿ ಗೋಚರಿಸಿ, ಚಕಿತನಾದೆ.
ಯಾರೀ ರಾಜರ ರಾಜ?

ಎನ್ನ ಆಶೆಗಳೆತ್ತರಕೇರಿ, ನನ್ನ ದುರ್ದಿನಗಳಿಗಂತ್ಯವಿದೆಂದೆ.
ಸಂಪತ್ತು ಹಾದಿಬದಿಯ ಧೂಳಿನಲಿ, ಚೆಲ್ಲವರಿವುದೆಂದು ಬಗೆದೆ.
ಈ ರಾಜನಿಂದ, ನನಗಾಗಿ ಬರುವ ಭಿಕ್ಷೆಗಾಗಿ, ಕೈಯೊಡ್ಡಿ ನಿಂತೆ.

ನಿನ್ನ ರಥವು, ನಾನು ನಿಂತ ತಾಣಕೆ ಬಂದು, ನಿಂತು,
ನಿನ್ನ ದೃಷ್ಟಿ ನನ್ನ ಮೇಲ್ಪರಿದು,
ಮುಗುಳ್ನಗೆಯ ನಗುತ ನನ್ನೆಡೆಗೆ ಬಂದೆ.
ಕೊಟ್ಟ ಕೊನೆಗೆ, ನನ್ನ ಭಾಗ್ಯ ನನ್ನೆಡೆಗೆ ಬಂತೆಂದು,
ನಾನು ಭಾವ ಪರವಶನಾದೆ, ಆದರೆ,
ಥಟ್ಟನೇ ನಿನ್ನ ಕೈಯನೆನ್ನೆಡೆಗೆ ಚಾಚಿ,
''ನೀನೆನಗೆ ಕೊಡುವುದೇನಿಹುದು'' ಎಂದು,
ನನ್ನ ಕೇಳಿದೆಯಲ್ಲ!

ಆಹ್! ಭಿಕ್ಷುಕನೆದುರು, ನೀನು ಭಿಕ್ಷೆಗಾಗಿ ಕೈಚಾಚುವುದೆ?
ಎಂಥ ದಿವ್ಯಮೋಜು?
ನಾನು, ಗಲಿಬಿಲಿಗೊಂಡು, ಏನೂ ಅರಿಯದವನಾಗಿ,
ನನ್ನ ಜೋಳಿಗೆಯಿಂದ, ಅತ್ಯಲ್ಪ ಪ್ರಮಾಣದ ಕಾಳುಗಳಕೊಟ್ಟೆ

ಆದರೆ, ಏನದ್ಭುತ!
ದಿನದ ಕೊನೆಗೆ, ನನ್ನ ಜೋಳಿಗೆಯನು
ನೆಲದ ಮೇಲೆ ಬರಿದಾಗಿಸಿದಾಗ,
ಅಲ್ಲಿ ಬಿದ್ದ ನಿಕೃಷ್ಟ ವಸ್ತುಗಳ ಸಣ್ಣ ರಾಶಿಯೊಳಗೆ,
ಅತ್ಯಲ್ಪ ಪ್ರಮಾಣದ ಹೊನ್ನ ಕಾಳುಗಳ ಕಂಡೆ.
ಓಹ್! ವಿಧಿಯೇ!

ಎನ್ನ ಜೋಳಿಗೆಯಲಿರುವುದೆಲ್ಲವನು ಕೊಟ್ಟು ಬಿಡುವ
ಮನಸು, ಎನಗಿರಬಾರದಿತ್ತೇ ಎಂದು, ಮರುಗುತಲಿರುವೆ.

೫೧

ಹೊತ್ತು ಕಳೆದು ಕತ್ತಲಾಯಿತು
ನಮ್ಮ ನಿತ್ಯಕೃತ್ಯಗಳು ಮುಗಿದಿಹವು.
ಈ ರಾತ್ರಿಯ ನಮ್ಮ ಕೊನೆಯ ಅತಿಥಿ
ಬಂದನೆಂದು ಬಗೆದು, ನಮ್ಮ ತಾಣದ ಎಲ್ಲ
ಬಾಗಿಲುಗಳನು ಮುಚ್ಚಿದೆವು.
ಕೆಲರು ಮಾತ್ರ ಹೇಳಿದರು ''ನಮ್ಮ ರಾಜನಿನ್ನೂ ಬರಬೇಕು''
ನಾವು ಉಪಹಾಸಗೈದು
''ಅದು ಅಶಕ್ಯ'' ಎಂದೆವು.

ಬಾಗಿಲನು ಯಾರೋ ತಟ್ಟಿದೊಲು ಭಾಸವಾಯಿತು.
ಅದು ಬರಿ ಗಾಳಿ ಎಂದು ದೀಪವ ನಂದಿಸಿ, ನಿದ್ರೆ ಹೋದೆವು.
ಕೆಲರು ಮಾತ್ರ ಹೇಳಿದರು ''ದೂತ ಬಂದಿಹನು''.
ನಾವು ಮತ್ತೆ ಉಪಹಾಸಗೈದು
''ಇಲ್ಲ ಅದು ಗಾಳಿಯಿಂದಾದ ಶಬ್ದವೇ'' ಎಂದೆವು.

ಮಧ್ಯ ರಾತ್ರಿಯಲಿ ಮತ್ತೊಂದು ಶಬ್ದವಾಯಿತು.
ನಾವು ನಿದ್ದೆಯ ಮಂಪರಿನಲಿ,
''ಅದು ದೂರದ ಸಿಡಿಲು'' ಎಂದೆವು.
ನೆಲನಡುಗಿತು, ಗೋಡೆಗಳದುರಿದವು,

ನಮ್ಮ ನಿದ್ದೆ ಸ್ವಲ್ಪ ಕಲಕುಗೊಂಡಿತು.
ಕೆಲರು ಮಾತ್ರ ಹೇಳಿದರು –
''ಅದು ರಥದ ಗಾಲಿಗಳ ಶಬ್ದ''.
ನಾವು ತೂಕಡಿಕೆಯಲಿ ಗೊಣಗಿದವು
''ಇಲ್ಲ, ಅದು ಮೋಡಗಳ ಗುಡುಗುವಿಕೆ ಇರಬಹುದು''.

ರಾತ್ರಿಯ ಕತ್ತಲಿನ್ನೂ ಕಳೆದಿರಲಿಲ್ಲ
ನಗಾರಿಗಳು ಶಬ್ದಗೈದವು
ಧ್ವನಿಯೊಂದು ಮೊಳಗಿತು
''ಎದ್ದೇಳಿ ತಡಮಾಡದಿರಿ''
ನಾವು ಭಯದಿಂದ ನಡುಗಿ,
ಎದೆಯೊತ್ತಿಕೊಂಡೆವು
ಕೆಲವರು ಕೂಗಿದರು.
''ನೋಡಿರಲ್ಲಿ ರಾಜನ ಪತಾಕೆ''.
ನಾವು ಎದ್ದುನಿಂತು ಕೂಗಿದೆವು
''ತಡಮಾಡಲೆಮಗೆ ವೇಳೆಯಿಲ್ಲ''.

ರಾಜ ಬಂದಿಹನು ಆದರೆ,
ದೀಪಗಳೆಲ್ಲಿ? ಹಾರಗಳೆಲ್ಲಿ?
ಆತನನು ಕುಳ್ಳಿರಿಸಲು ಆ ಪೀಠವೆಲ್ಲಿ?
ಓಹ್! ನಾಚಿಕೆಗೇಡು ಎಂಥ ನಾಚಿಕೆಗೇಡು?
ಆತನ ಕೋಣೆಯೆಲ್ಲಿ? ಕೋಣೆಯ ಶೃಂಗಾರವೆಲ್ಲಿ?

ಯಾರೋ ಹೇಳಿದರು –
''ವ್ಯರ್ಥವೀ ಪರದಾಟವೆಲ್ಲ!
ಬರಿಗೈಯ್ಯಲಿ ಆತನನೆದುರುಗೊಂಡು,
ಶೃಂಗರಿಸದ ನಿಮ್ಮ ಕೋಣೆಗಳಿಗೆ ಕರೆದೊಯ್ಯಿರಿ''

ಬಾಗಿಲನು ತೆರೆಯಿರಿ, ಶಂಖ ಮೊಳಗಲಿ,
ನಮ್ಮ ನಿರಾನಂದಕರವಾದ ಕತ್ತಲ ಮನೆಯ ರಾಜ,
ರಾತ್ರಿಯು ಆಳದಲಿ ಇರುವಾಗ ಬಂದಿಹನು.
ಸಿಡಿಲು ಆಗಸದಲಿ ಮೊಳಗುತಿಹುದು.
ಮಿಂಚಿನ ಬೆಳಕಿನಲಿ ಕತ್ತಲು ನಡುಗುತಿಹುದು.
ನಿನ್ನ ಹರಿದ ಚಾಪೆಯನು ಹೊರತಂದು
ಮನೆಯ ಮುಂದಿನ ಅಂಗಳದಲಿ ಹಾಸು,
ಭಯಾನಕ ರಾತ್ರಿಯ ನಮ್ಮ ರಾಜ
ಬಿರುಗಾಳಿಯೊಡಗೂಡಿ ಥಟ್ಟನೇ ಬಂದಿಹನು.

೫೨

ನೀ ಧರಿಸಿದ ಗುಲಾಬಿಯ ಮಾಲೆಯನು
ಕೇಳಬೇಕೆಂದು ಬಗೆದೆ, ಆದರೆ,
ಧೈರ್ಯ ಸಾಲದಾಯಿತೆನಗೆ. ಅಂತಲೇ,
ಬೆಳಗಾಗುವ ವರೆಗೆ ಕಾಯ್ದು, ನೀನೆದ್ದು
ಹೊರಟುಹೋದ ಮೇಲೆ, ಹಾಸಿಗೆಯಲಿ
ಚದುರಿ ಬಿದ್ದ ಕೆಲ ಅವಶೇಷಗಳ ಕಂಡೆ.

ಜಾವದಲಿ ಭಿಕ್ಷುಕಿಯಂದದಿ ಒಂದೆರಡು
ದಳಗಳಿಗಾಗಿ ತಡಕಾಡಿದೆ.

ಆಹ್! ನನಗೆ ದೊರಕಿದುದೇನು?
ನೀ ಬಿಟ್ಟ ನಲ್ಮೆಯ ಗುರುತಿದೇನು?
ಇದು ಕುಸುಮವಲ್ಲ, ಇದು ರಸನೆಯ
ತಣಿಸುವ ರಸವಲ್ಲ, ಇದು
ಸೌರಭವ ಸೂಸುವ ನೀರು ತುಂಬಿದ
ಕಲಶವಲ್ಲ, ಇದು ಸಿಡಿಲಿನ ತೂಕದ
ನಿನ್ನ ಆದ್ಭುತ ಖಡ್ಗ, ಉರಿಯ ನಾಲಗೆಯಂತೆ
ಹೊಳೆಯುತಿಹುದು. ಮುಂಜಾವಿನ, ಎಳೆಯ ಬಿಸಿಲು
ಕಿಂಡಿಯೊಳಗಿಂದೆಸದು, ನಿನ್ನ ಹಾಸಿಗೆಯ
ಮೇಲ್ಪಸರಿಸಿಹುದು. ಜಾವದಲಿ
ಚಿಲಿಪಿಲಿಗುಟ್ಟುತ ಹಕ್ಕಿ ಕೇಳಿತೆನಗೆ –
''ಲಲನೆ, ಏನು ದೊರಕಿತು ನಿನಗೆ?''
ಇದು ಕುಸುಮವಲ್ಲ, ಇದು
ರಸನೆಗೊದಗುವ ಸವಿಯಲ್ಲ,
ಇದು ಸೌರಭವ ಸೂಸುವ ನೀರ
ಕಲಶವಲ್ಲ, ಇದು ನಿನ್ನ ಭಯಾನಕದ ಖಡ್ಗ.

ನಾನಚ್ಚರಿಯಲಿ ಕುಳಿತು, ಯೋಚಿಸುತಲಿರುವೆ
ಏನೀ ನಿನ್ನ ಕೊಡುಗೆ? ಇದನು ಮುಚ್ಚಿಡಲು
ಸ್ಥಳವಿಲ್ಲವೆನ್ನೊಳು. ದುರ್ಬಲ ನಾನು,

ಅಂತಲೇ, ಇದನು ಧರಿಸಲು ನಾಚಿಕೆಯೆನಗೆ
ಇದನಪ್ಪಿಕೊಂಡಾಗ, ನನ್ನೆದೆಗೆ ಚುಚ್ಚಿ ಬಾಧಿಸುತಿಹುದು.
ಆದರೂ, ನಿನ್ನ ಕೊಡುಗೆಯು ತಂದ
ನೋವಿನ ಭಾರದ ಗೌರವವನು, ನನ್ನೆದೆಯಲಿ
ಬಲು ನಲುಮೆಯಲಿ ರಕ್ಷಿಸುವೆನು.

ಈಗೆನಗೆ ಈ ಜಗದ ಎಲ್ಲ ರೀತಿಯ ಭಯ ತೊಡೆದು
ನನ್ನೆಲ್ಲ ಹೋರಾಟದಲಿ ಜಯಸಿರಿಯು ನಿನಗೇ.
ನೀ, ಸಾವನೆನ್ನ ಸಂಗಾತಿಯನ್ನಾಗಿಸಿಹೆ.
ನನ್ನ ಬದುಕಿನ ಮುಕುಟವನವಗೆ ತೊಡಿಸುವೆನು ನಾನು.
ಬದುಕಿನ ಬಂಧನಗಳ ಕಡಿದು ಹಾಕಲು
ನಿನ್ನ ಖಡ್ಗವೆನಗಿಹುದು. ಆವ ತೆರನ
ಭಯವೂ ಎನಗುಳಿದಿಲ್ಲವೀಗ.

ಇನ್ನು ಮುಂದೆ, ಅಲ್ಪ ಶೃಂಗಾರಗಳನೆಲ್ಲ ತೊಡೆದು ಬಿಡುವೆ.
ಓ ನನ್ನೆದೆಯ ಒಡೆಯನೇ,
ಇನ್ನೇಕೆ ನಿನಗಾಗಿ ಏಕಾಂತದಲಿ ಶೋಕ?
ಇನ್ನೇಕೆ ನಾಚಿಕೆಯು? ಇನ್ನೇಕೆ
ಮುದ ಕೊಡುವ ವರ್ತನೆಯ ಗುಲಾಮನಾಗಲಿ ನಾನು?
ನನ್ನ ಆರಾಧನೆಗೆ ನಿನ್ನ ಖಡ್ಗವನೆ ಕೊಟ್ಟಿರುವೆ.
ಬೊಂಬೆಯನು ಸಿಂಗರಿಸುವಾಟ ಇನ್ನು ಬೇಡನಗೆ.

೫೩

ಅಗಣಿತ ಬಣ್ಣಗಳ ತಾರೆಗಳ ಬಳಸಿ
ಕಟೆದಿರುವ ನಿನ್ನ ಕೈಯ ಕಂಕಣ
ಎಷ್ಟು ಸುಂದರವಿಹುದು?
ಆದರೆ, ಕ್ರೋಧತಪ್ತ ಸಂಜೆಯ ಸೂರ್ಯನ, ಕೆಂಪು ಕಿರಣದಲಿ
ಮಿಂಚುವ ಗರುಡನ ತೆರೆದ ರೆಕ್ಕೆಗಳಂತೆ,
ಹೊಳೆಯುತಿಹ ಮಿಂಚು ಬಳ್ಳಿಯ ಡೊಂಕಿನ ನಿನ್ನ ಖಡ್ಗ
ಹೆಚ್ಚು ಸುಂದರವೆನಗೆ.

ಸಾವಿನ ಕೊನೆಯ ಹೊಡೆತ ತರುವ ನೋವಿಗೆ,
ಬದುಕು, ಕೊನೆಗೊಮ್ಮೆ ಆತ್ಮಾನಂದದಲಿ ನಲುಗುವಂತೆ
ಆವೇಶದಲಿ ಅದುರುತಿದೆ ನಿನ್ನ ಖಡ್ಗ.
ಭವದ ಬಂಧನಗಳನೆಲ್ಲ ಸುಡುವ
ಶುದ್ಧ ಉರಿಯ ಒಂದು ತೀಕ್ಷ್ಣ ನಾಲಗೆಯು
ಹೊಳೆಯುವಂದದಿ ಹೊಳೆಯುತಿಹುದು.

ತಾರೆಗಳ ರತ್ನದಿಂ, ಸಿಂಗರಿಸಿದ
ನಿನ್ನ ಕೈಯ ಕಂಕಣ, ಸುಂದರವಾಗಿಹುದು.
ಆದರೆ, ಓ ಸಿಡಿಲಿನೊಡೆಯನೆ,
ನಿನ್ನ ಖಡ್ಗಕೆ ಸಹಿಸಲಸದಳದ ಚಲುವು.
ನೋಡಲು ರುದ್ರಮನೋಹರ
ನೆನೆಯಲು ಭಯಾನಕ.

## ೫೪

ನಿನ್ನಿಂದ ನಾನೇನನೂ ಕೇಳಲಿಲ್ಲ
ನನ್ನ ಹೆಸರನೂ ನಿನಗೆ ನಾ ಹೇಳಲಿಲ್ಲ.
ನೀನು ಹೊರಟು ನಡೆದಾಗ, ನಾನು ಮೌನದಲಿ ನಿಂತೆ.
ಮರದ ನೆರಳು ಓರೆಯಾಗಿ ಬಿದ್ದಾಗ
ಭಾವಿಯ ಬಳಿ ನಾನೋರ್ವನೇ ನಿಂತಿದ್ದೆ.
ಹೆಂಗಳೆಯರೆಲ್ಲರೂ
ಮಣ್ಣಿನ ಬಿಂದಿಗೆಗಳ ಕಂಠಪೂರ್ತಿ ತುಂಬಿಕೊಂಡು
ಹೊರಟು ಹೋಗಿಹರು.
''ಮುಂಜಾನೆ ಸರಿದು ಬೇಗೆ ಬಂದಿಹುದು-
ಬಾರೆಮ್ಮೊಡನೆ'' ಎಂದು, ಕರೆದರವರೆನ್ನ,
ಆದರೆ, ನಾನು ಅಸ್ಪಷ್ಟ ಚಿಂತನೆಯಲಿ
ತಲ್ಲೀನನಾಗಿ ಅಲ್ಲಿಯೇ ನಿಂತೆ.

ನೀನು ಬಂದಾಗ, ನಿನ್ನ ಹೆಜ್ಜೆ ಸಪ್ಪಳವನು
ನಾ ಕೇಳಲಿಲ್ಲ, ನಿನ್ನ ನೋಟ ನನ್ನ ಮೇಲೆ
ಬಿದ್ದಾಗ, ನಿನ್ನ ಕಂಗಳಲಿ ಖೇದ ತುಂಬಿತ್ತು.
''ಆಹ್, ನಾನು ಬಾಯಾರಿಕೆಯಿಂದ
ಬಸವಳಿದ ಪಯಣಿಗನು'' ಎಂದು,
ನೀನುಸುರಿದಾಗ, ನಿನ್ನ ಧ್ವನಿಯು
ಬಹಳ ದಣಿದಿತ್ತು.
ಹಗಲುಗನಸುಗಳೊಳಗಿಂದ ದಿಗ್ಗನೆ ಎಚ್ಚೆತ್ತು

ನನ್ನ ಹೂಜೆಯನೆತ್ತಿ, ನಿನ್ನ ಬೊಗಸೆಗೆ
ನೀರು ಸುರಿದೆ.
ನನ್ನ ತಲೆಯ ಮೇಲೆ, ಮರದ ಎಲೆಗಳು
ಮರ್ಮರ ಶಬ್ದಗೈದವು.
ಕಾಣದ ತಾಣದಿಂದ ಕೋಗಿಲೆಯೊಂದು ಕೂಗೈದಿತು
ಹಾದಿಯ ತಿರುವಿನಿಂದ
ಕುಸುಮಗಳ ಸೌರಭವು ತೇಲಿಬಂತು.

ನೀನೆನ್ನ ಹೆಸರು ಕೇಳಿದಾಗ
ನಾನು ನಾಚಿ ಮೂಕನಾಗಿ ನಿಂತೆ.
ನನ್ನ ನೀ ನೆನೆವಂತೆ,
ನಾ ಮಾಡಿಹುದಾದರೂ ಏನು?
ಆದರೆ, ನಿನ್ನ ದಾಹವ ನೀಗಿಸಲು
ನಾನು ನಿನಗೆ ಕೊಟ್ಟ ಸವಿನೆನಪು,
ನನ್ನ ಹೃದಯವನ್ನಪ್ಪಿಕೊಂಡಿಹುದು.
ಮುಂಜಾವು ಮೀರಿದ ಈ ಘಳಿಗೆ ಗಳಲಿ
ಹಕ್ಕಿಗಳು ದಣಿದ ರಾಗಗಳ ಹಾಡುತಿಹವು.
ನಾನಿಲ್ಲಿ ಕುಳಿತು ಮರಮರಳಿ ಯೋಚಿಸುತ್ತಿರುವೆ.

೫೫

ನಿನ್ನ ಹೃದಯ ದಣಿದಿಹುದು
ಕಂಗಳಲಿನ್ನೂ ನಿದ್ರೆಯ ಮಂಪರಿಹುದು.

ಮುಳ್ಳುಗಳ ಮೇಲೆ
ಹೂವಿನಾಧಿಪತ್ಯವ ಕಂಡು
ನಿನಗೆ ಸಂದೇಶ ದೊರಕಿಲ್ಲವೇ?
ಎದ್ದೇಳು ಓ! ನಿದ್ದೆಯ ಬಿಟ್ಟು ಎಚ್ಚೆತ್ತುಕೋ,
ವ್ಯರ್ಥದಲಿ ಸಮಯವನು ಸರಿಯಗೊಡಬೇಡ.

ಕಲ್ಲು ದಾರಿಯ ಕೊನೆಗೆ
ಕನ್ನಿಕೆಯ ತೆರನ, ನಿಷ್ಕಲಂಕದೇಕಾಂತದ ರಾಜ್ಯದಲಿ
ನನ್ನ ಗೆಳೆಯನೋರ್ವನೇ ಕುಳಿತಿಹನು.
ಮೋಸಗೊಳಿಸದಿರು ಅವನ.
ಎದ್ದೇಳು, ಓ!
ನಿದ್ದೆಯನು ಬಿಟ್ಟು ಎಚ್ಚೆತ್ತುಕೋ.

ಮಧ್ಯಾನ್ಹದ ರವಿಯ ಸುಡುವ ಬೇಗೆಯಿಂದ
ಆಗಸವು ಏದುಸಿರು ಬಿಡುತ ನಲುಗಿದರೇನು?
ಸುಡುಸುಡುವ ಮಳಲು ತನ್ನ ದಾಹದ
ಹೊದಿಕೆಯನು, ತುಂಬೆಲ್ಲ ಪಸರಿಸಿದರೇನು?

ನಿನ್ನ ಹೃದಯಾಂತರಾಳದಲಿ,
ಸಂತಸವು ತುಂಬಿಲ್ಲವೇ?
ನೀನಡೆಯುತಿಹ ದಾರಿಯ ವೀಣೆಯು
ನಿನ್ನ ಪ್ರತಿಯೊಂದು ಹೆಜ್ಜೆಗೂ
ಸುಖ ಕೊಡುವ ನೋವಿನ ಸುಶ್ರಾವ್ಯ ಸ್ವರವನು
ಹೊರಡಿಸುತಲಿಲ್ಲವೇ?

೫೬

ನಿನ್ನ ಸಂತಸವು ನನ್ನೊಳಗೆ, ಇನಿತೊಂದು ತುಂಬಿಹುದು -
ನೀನೆ ಕೆಳಗಿಳಿದು ನನ್ನೆಡೆಗೆ ಬಂದಿರುವೆ.
ಓ ಸರ್ವ ಸಗ್ಗಗಳೊಡೆಯನೇ
ನಾನು ಇಲ್ಲಿರದಿರ್ದೊಡೆ
ನಿನ್ನ ನಲ್ಮೆ, ಎಲ್ಲಿ ಪ್ರಕಟವಾಗುತ್ತಿತ್ತೋ?

ಈ ಎಲ್ಲ ವೈಭವಕೆ, ನೀ, ಎನ್ನ
ಸಹಭಾಗಿಯಾಗಿಸಿಕೊಂಡಿರುವೆ. ನನ್ನ
ಹೃದಯದೊಳು, ನಿನ್ನ ಕೊನೆಯಿಲ್ಲದಾನಂದದಾಟ
ಎಡೆಬಿಡದೆ ನಡೆದಿಹುದು.
ನನ್ನ ಬದುಕಿನಲಿ ನಿನ್ನ ಇಚ್ಛೆ
ಪ್ರಕಟಗೊಳುತಿಹುದು ಸದಾ.

ಇದಕಾಗಿಯೇ, ನೀನು ರಾಜರ ರಾಜನಾದರೂ
ನನ್ನ ಹೃದಯವ ಸೆರೆಹಿಡಿಯಲು
ನಿನ್ನನೇ ನೀ ಸಿಂಗರಿಸಿಕೊಂಡಿರುವೆ.
ಇದಕಾಗಿಯೇ, ನಿನ್ನ ನಲ್ಮೆ
ನಿನ್ನ ನಲ್ಲೆಯ ನಲ್ಮೆಯೊಳು
ಐಕ್ಯವಾಗಿಹುದು. ಈ ಎರಡರ
ಸಂಪೂರ್ಣ ಒಂದಾಗುವಿಕೆಯಲಿ
ನೀನ್ ಗೋಚರಿಸುತ್ತಿರುವೆ.

೫೭

ಬೆಳಕೆ ! ನನ್ನ ಬೆಳಕೆ !
ಜಗವ ತುಂಬುವ ಬೆಳಕೆ !
ಕಣ್ಣ ಚುಂಬಿಸುವ ಬೆಳಕೆ !
ಹೃದಯವ ಸವಿಗೊಳಿಪ ಬೆಳಕೆ !

ಆಹ್ ! ನನ್ನ ಬಾಳ ಮಧ್ಯದಲಿ
ಬೆಳಕು ಕುಣಿದಾಡುತಿದೆ ಒಡೆಯ
ಪ್ರೇಮದ ತಂತಿಗಳನೀ ಬೆಳಕು
ಮಿಡಿಯುತಿದೆ ನನ್ನೊಡೆಯ
ಬಾನ್ ತೆರೆಯುತಿದೆ ಮರುತನೋಡುತಿಹ
ನಗೆಯಾವರಿಸಿದೆ ಬುವಿಯ.

ಬೆಳಕಿನಂಬುಧಿಯ ಮೇಲೆ
ಚಿಟ್ಟೆಗಳು ತೇಲುತಿವೆ

ಗುಲಾಬಿ ಮಲ್ಲಿಗೆಗಳು
ಬೆಳಕಿನ ತೆರೆಯ ಮೇಲ್ ಈಜುತಿಹವು.

ಬೆಳಕು ಮುಗಿಲಿನಲಿ ಒಡೆದು
ಹೊನ್ನ ಕಿರಣವಾಗಿದೆ ಒಡೆಯ
ಅಸಂಖ್ಯ ಮುತ್ತುಗಳು ಸುರಿಯುತಿಹವು.

ನಲಿವು ಎಲೆಯಿಂದ ಎಲೆಗೆ
ಪಸರಿಸುತಿದೆ ನನ್ನೊಡೆಯ

ಸಂತಸವು ಮೇರೆ ಮೀರಿಹುದು
ಸಗ್ಗದ ನದಿಗೆ ನೆರೆ ಬಂದು, ದಡ ದಾಟಿ
ಹರಡಿಹುದು ಎಲ್ಲೆಲ್ಲೂ ದಿವ್ಯ ಆನಂದ.

೫೮

ಹಸಿರು ಹುಲ್ಲಿನ ವಿಲಾಸಾತಿರೇಕದ ಮೂಲಕ
ಬುವಿಯು ಪ್ರವಹಿಸುವಂತೆ ಮಾಡುವಾನಂದ,
ಅವಳಿಸೋದರರಾದ ಜೀವ, ಸಾವುಗಳನು
ವಿಶಾಲ ಜಗದ ಮೇಲೆ ಕುಣಿವಂತೆ ಮಾಡುವಾನಂದ,
ತನ್ನ ನಗುವಿಂದ ಜಗದ ಜೀವನವನೆಲ್ಲ
ಅಲುಗಿಸಿ ಎಚ್ಚರಿಸೆ
ಬಿರುಗಾಳಿಯೊಳು ಬೀಸಿ, ಬರುವ ಆನಂದ,
ನೋವಿನ ಕೆಂಪು ಕಮಲದ ಮೇಲೆ
ತನ್ನ ಕಂಬನಿಗಳೊಡನೆ, ಸ್ಥಬ್ದದಲಿ ಕುಳಿತ ಆನಂದ,
ತನಗರಿವಿಲ್ಲದೇ, ತನ್ನದೆಲ್ಲವನು
ಬುವಿಯ ಹುಡಿಗೆಸೆವ ಆನಂದ,
ಈ ಎಲ್ಲ ಆನಂದದ ಎಳೆತಗಳೆಲ್ಲವೂ
ನನ್ನ ಕೊನೆಯ ಹಾಡಿನಲಿ ಕೂಡಿಬಿಡಲಿ.

೫೯

ಹಸಿರು ಚಿಗುರುಗಳ ಮೇಲೆ ನರ್ತಿಸುತಿಹ ಹೊನ್ನಗಿರಣಗಳು
ಮೇಣ್, ನೀಲ ಬಾನಂಗಳದಲಿ ತೇಲಿ ಸರಿಯುತಿಹ ಮೋಡಗಳು
ಮೇಣ್, ನನ್ನ ಮೊಗಕೆ ತಂಪನೀವುತ ಬೀಸುತಿಹ ನಸುಗಾಳಿ
ಇವು, ನಿನ್ನ ನಲ್ಮೆಯಲ್ಲದೇ ಬೇರೇನೂ ಅಲ್ಲವೆಂದು
ನಾ ಬಲ್ಲೆ - ನನ್ನೊಡೆಯ.

ಮುಂಜಾವಿನ ಬೆಳಕು, ಕಣ್ಣ ಕೋರೈಸಿಹುದು.
ಇದು, ನನ್ನ ಹೃದಯಕೆ ನಿನ್ನ ಸಂದೇಶ.
ನಿನ್ನ ಮೊಗವು, ಮೇಲಿಂದ ನನ್ನೆಡೆಗೆ ಬಾಗಿಹುದು,
ನಿನ್ನ ದೃಷ್ಟಿ, ನನ್ನ ಕಂಗಳಮೇಲೆ ನೆಟ್ಟಿಹುದು.
ಎನ್ನ ಹೃದಯ, ನಿನ್ನ ಪಾದಗಳ ಮುಟ್ಟಿಹುದು.

೬೦

ಕೊನೆಯಿರದ ಜಗಂಗಳ ಸಾಗರದ ತೀರದಲಿ
ಹಸುಳೆಗಳು ನೆರೆಯುವರು.
ತಲೆಯ ಮೇಲೆ, ಅನಂತದಾಗಸವು ನಿಶ್ಚಲವಾಗಿಹುದು
ಕ್ಷುಬ್ಧ ಸಾಗರದ ನೀರು ಭೋರ್ಗರೆಯುತಿಹುದು.
ಕೊನೆಯಿರದ ಜಗಂಗಳ ಸಾಗರದ ತೀರದಲಿ
ಸಂತಸದಿ ಕೇಕೆಹಾಕುತ, ಕುಣಿದಾಡುತ,
ಹಸುಳೆಗಳು ನೆರೆಯುವರು.

ಮರಳಿನಲಿ ತಮ್ಮ ಮನೆಗಳನು ಕಟ್ಟುವರು.
ಬರಿದಾದ ಚಿಪ್ಪುಶಿಂಪಿಗಳಕೊಂಡು ಆಡುತಿಹರು
ತರಗೆಲೆಗಳಿಂದ ಹರಿಗೋಲ ಹೆಣೆವರು
ಅವುಗಳನು ನಗುನಗುತ ವಿಶಾಲದಲಿ ತೇಲಿಸುವರು.
ಜಗಂಗಳ ಸಾಗರದ ತೀರದಲಿ ಹಸುಳೆಗಳು
ತಮ್ಮ ಆಟಗಳನಾಡುತಿಹರು.

ಹೇಗೆ ಈಜುವದೆಂದು ತಿಳಿಯರವರು.
ಬಲೆಯ ಬೀಸುವದನು ಅರಿಯರವರು.
ಈಜುಗಾರರು ಮುತ್ತುಗಳ ತೆಗೆಯಲು
ಮುಳಗುಹಾಕುತಿಹರು.
ವರ್ತಕರು ತಮ್ಮ ಹಡಗುಗಳೊಡನೆ, ತೇಲುತಿಹರು
ಆದರೆ, ಈ ಹಸುಳೆಗಳು
ಚಿಪ್ಪುಗಳ ಕೂಡಿಸಿ ಮತ್ತೆ ಚಲ್ಲವರಿಯುವರು.
ಗುಪ್ತ ನಿಧಿಗಾಗಿ ಹುಡುಕಾಡರವರು.
ಬಲೆಯ ಬೀಸುವದನು ಅರಿಯರವರು.

ಸಾಗರವು ಉಬ್ಬುವದು ಸಂತಸದ ನಗೆಯ ಚೆಲ್ಲಿ,
ಮುಗುಳು ನಗೆಯನೆಸೆಯುತ ಮಿನುಗುವದು ಮರಳ ತೀರ.
ತೊಟ್ಟಿಲ ತೂಗುತ ತಾಯಿ ಕಂದನಿಗೆ ಹಾಡ ಹಾಡುವೊಲು
ಸಾವತರಬಲ್ಲ ತೆರೆಗಳು, ಅರ್ಥವಿರದ ಹಾಡುಗಳ
ಹಾಡುತಿಹವು, ಈ ಹಸುಳೆಗಳಿಗೆ.
ಅಬ್ಬಿಯಾಡುವುದು ಹಸುಳೆಗಳೊಡನೆ.
ಮುಗುಳು ನಗೆಯ ನಗುತ ಮಿನುಗುವದು ಮರಳ ತೀರ.

ಕೊನೆಯಿರದ ಜಗಂಗಳ ಸಾಗರದ ತೀರದಲಿ
ಹಸುಳೆಗಳು ನೆರೆಯುವರು
ದಾರಿಯಿರದಂಬರದಿ ಬಿರುಗಾಳಿ ತಿರುಗುವದು
ಹಡಗುಗಳೊಡೆಯುವವು ಪಥವಿರದ ಜಲಧಿಯಲಿ
ಸಾವು ಹರಡಿಹುದು ದಿಕ್ಕು ದಿಕ್ಕಿನಲಿ
ಹಸುಳೆಗಳಾಡುವರು ಸಾಗರದ ತೀರದಲಿ
ಕೊನೆಯಿರದ ಜಗಂಗಳ ಸಾಗರದ ತೀರದಲಿ
ಹಸುಳೆಗಳ ಶ್ರೇಷ್ಠ ಕೂಟವಿಹುದು.

೬೧

ಕಂದನ ಕಂಗಳಿಗೆ ಬರುವ ನಿದ್ರೆ
ಎಲ್ಲಿಂದ ಬಂತೆಂದು ಬಲ್ಲಿರೇನು ?
ದೂರ ಕಾನಿನ ದಟ್ಟ ಮರಗಳ ನೆರಳಿನಲಿ
ಮಿಂಚುಹುಳುಗಳ ಮಂದ್ರ ಬೆಳಕಿನಲಿ, ಬೆಳಗುತಿಹ
ಯಕ್ಷ ಲೋಕವೊಂದಿದ್ದು
ಅಲ್ಲಿ ಮಾಂತ್ರಿಕ ಶಕ್ತಿಯನು ಹೊಂದಿರುವ
ಎರಡು ಎಳೆಯ ಮೊಗ್ಗುಗಳು,
ತೂಗಾಡುತಿಹವೆಂಬ ಸುದ್ದಿಯೊಂದಿಹುದು.
ಹೌದು, ಆ ಮೊಗ್ಗುಗಳಿಂದ ಹೊರಟ ನಿದ್ರೆ
ಕಂದನ ಕಣ್ಣುಗಳ ಚುಂಬಿಸಲು ಬರುವದು.

ಮಲಗಿದ ಕಂದನ ತುಟಿಗಳಲಿ ಮಿಂಚುವ ಮುಗುಳು ನಗೆ
ಎಲ್ಲಿ ಹುಟ್ಟಿತೆಂದು ಬಲ್ಲಿರೇನು ?
ಬಿದಿಗೆಯ ಚಂದ್ರನ ಎಳೆಯ ಕಿರಣವು
ಶರತ್ಕಾಲದ ಕರಗುತಿಹ ಮೋಡದ ಅಂಚನು ಮುಟ್ಟಿ
ಮಂಜಿನಲಿ ಮೈದೊಳೆದ ಮುಂಜಾವಿನ ಕನಸಿನಲಿ
ಮೊಟ್ಟಮೊದಲಿಗೆ ಇದು ಹುಟ್ಟಿತೆಂಬ ಸುದ್ದಿಯೊಂದಿಹುದು.
ಅದೇ
ಮಲಗಿದ ಕಂದನ ತುಟಿಗಳಲಿ ಮಿಂಚುವ ಮುಗುಳು ನಗೆಯು.

ಕಂದನ ಮೈಮೇಲೆ ಅರಳಿರುವ
ಮಧುರ, ಕೋಮಲದ ಹೊಚ್ಚಹೊಸ ಕಳೆಯು
ಎಲ್ಲಿ ಅಡಗಿತ್ತೆಂದು ಬಲ್ಲಿರೇನು ?
ಕಂದನ ತಾಯಿ, ಚಿಕ್ಕ ಕನ್ನಿಕೆಯಿರಲು,
ಅವಳ ಹೃದಯದಲಿ, ಎಳೆಯ ಮೇಣ್ ಮೌನವಾದ
ನಲ್ಮೆಯ ನಿಗೂಢತೆಯಾಗಿ ನೆಲೆಸಿತ್ತು ಈ ಕಳೆಯು.
ಇದುವೆ ಕಂದನ ಮೈಮೇಲೆ ಅರಳಿರುವ
ಮಧುರ ಕೋಮಲದ ಹೊಚ್ಚಹೊಸ ಕಳೆಯು.

೬೨

ಮಗುವೇ
ನಿನಗಾಗಿ ಬಣ್ಣ ಬಣ್ಣಗಳ ಆಟಿಕೆಗಳ ತಂದಾಗ
ಮೋಡಗಳ ಮೇಲೆ, ಮೇಣ್

.ಹರಿವ ಹೊಳೆಯ ನೀರಿನ ಮೇಲೆ
ಇನಿತೊಂದು ಬಣ್ಣಗಳ ಆಟ ಏಕಿಹುದೆಂದು ತಿಳಿವೆ,
ಮೇಣ್, ಇನಿತೊಂದು ಬಣ್ಣಗಳ ಹೊತ್ತು
ಮಲರುಗಳು ಅರಳುವದು ಏಕೆಂದು ಅರಿವೆ.

ಮಗುವೇ
ನೀನು ಸಂತಸದಿಂ, ಕುಣಿವಂತೆ ಮಾಡಲು,
ನಾನು ಹಾಡ ಹಾಡಿದಾಗ
ಎಲೆಗಳಲಿ ಸಂಗೀತವೇಕಿಹುದು, ಅರಿವೆ.
ಮೇಣ್, ಬುವಿಯ ಹೃದಯಕೆ, ಸಮೂಹಗಾನವ
ತೆರೆಗಳೇಕೆ ಕಳಿಸುವವು ಎಂದು ತಿಳಿವೆ.

ಮಗುವೇ
ನಿನ್ನ ಆಶೆಯ ಕೈಗಳಿಗೆ ಸಿಹಿ ತಿನಿಸು ತಂದಾಗ
ಹೂವುಗಳ ಹೃದಯದಲಿ ಮಧುವು ಏಕಿಹುದು, ತಿಳಿವೆ,
ಫಲಗಳಲಿ, ಸವಿ ರಸವು ತುಂಬಿರುವುದೇಕೆಂದು ಅರಿವೆ,

ಮಗುವೇ
ನಿನ್ನ ನಗಿಸಲು ನಿನ್ನ ಮೊಗವ ನಾ ಚುಂಬಿಸಿದಾಗ
ಮುಂಜಾವಿನ ಹೊನ್ನ ಕಿರಣದಲಿ
ಆಗಸದಿಂದೊಗೆವ ಆನಂದವೇನೆಂದು ಅರಿವೆ,
ಮೇಣ್, ವಸಂತದ ಮಂದ ಮಾರುತವು
ಈ ದೇಹಕೆ ತರುವ ಪರಮ ಸುಖವೇನೆಂದು ತಿಳಿವೆ.

೬೩

ನಾನರಿಯದನಿತೋ ಜನರನು,
ನನ್ನ ಗೆಳೆಯರನಾಗಿಸಿದೆ ನೀನು,
ನನ್ನವಲ್ಲದ ಮನೆಗಳಲಿ,
ನನಗೆ ಸ್ಥಾನವನು ಕೊಡಿಸಿದೆ.
ದೂರದವರನೆನ್ನ ಹತ್ತಿರಕೆ ಸೇರಿಸಿದೆ.
ಅಪರಿಚಿತರನೆನ್ನ ಸೋದರರನಾಗಿಸಿದೆ.

ನನಗೊಗ್ಗಿದ ಜಾಗೆಗಳ ಬಿಡುವ ಸಮಯ ಬಂದಾಗ
ನನ್ನ ಹೃದಯದ ಸೌಖ್ಯ ಕದಡುವದು.
ಹೊಸತರಲಿ ಹಳೆಯದು ನೆಲಸಿಹುದು, ಮೇಣ್
ಅಲ್ಲಿಯೂ ನೀನಿರುವೆ ಎಂಬುದನು ನಾ ಮರೆವೆ.

ಜನನ ಮರಣಗಳ ಮೂಲಕ
ಈ ಜಗ ಮತ್ತೆ ಬೇರೆ ಜಗಂಗಳಲಿ
ನೀನೆ ನನ್ನ ಮುನ್ನಡೆಸುತಲಿರುವೆ.
ನನ್ನ ಕೊನೆಯಿರದ ಜೀವನದ ಸಂಗಾತಿಯಾಗಿ
ನನ್ನ ಹೃದಯದ ಆನಂದದ ಬಂಧನಗಳನು
ನನಗೆ ಪರಿಚಿತರಲ್ಲದವರೊಡನೆ, ಹೊಸೆಯುತಿರುವೆ.

ನಿನ್ನ ಅರಿದೊಡೆ ಆಗ ಹೆರವರಾರೂ ಇಲ್ಲ
ಆವ ಬಾಗಿಲೂ ಆಗ ಮುಚ್ಚಿಕೊಂಡಿರದು.
ಓ ನನ್ನ ದೊರೆಯೇ,

ಬಹುಜನರ ಆಟದಲಿ,
ನಿನ್ನೊಬ್ಬನ ಸಂಗದ ಆನಂದವನು,
ನಾನು ಕಳೆದುಕೊಳ್ಳದೊಲು,
ನನ್ನ ಬೇಡಿಕೆಯನೀಡೇರಿಸು ತಂದೆ.

೬೪

''ಕನ್ನಿಕೆಯೇ
ನಿನ್ನ ಸೆರಗಿನ ಮರೆಯಲಿ ದೀಪವನು ರಕ್ಷಿಸುತೆ,
ಅದನೆಲ್ಲಿಗೆ ಕೊಂಡೊಯ್ಯುತಿರುವೆ ?
ನನ್ನ ಮನೆ ಕತ್ತಲಾಗಿಹುದು, ಏಕಾಂಗಿಯಾಗಿಹುದು
ಎರವಲಾಗಿ ನಿನ್ನ ಬೆಳಕನೀಯು'' ಎಂದು
ನದಿಯ ನಿರ್ಜನ ಇಳಿಜಾರಿನಲಿ,
ಎತ್ತರಕ್ಕೆ ಬೆಳೆದ ಹುಲ್ಲಿನಲಿ, ಅವಳ ಕೇಳಿದೆನು.

ತನ್ನ ಕಪ್ಪು ಕಂಗಳ ಕ್ಷಣ ಹೊತ್ತು ಎತ್ತಿ
ಮುಸುಕು ಮುಚ್ಚಂಜೆಯಲಿ, ಎನ್ನ ಮೊಗವ ನೋಡಿದಳು.
''ದಿನದ ಬೆಳಕು ಪಡುವಣದಲಿ ಕ್ಷಯಿಸುವಾಗ
ಹೊನಲಿನಲಿ ತೇಲ್ಬಿಡಲು ಈ ನದಿಗೆ ಬಂದಿರುವೆ''
ಎಂದಳವಳು.

ಎತ್ತರದ ಹುಲ್ಲಿನಲಿ ನಾನೋರ್ವನೇ ನಿಂತು,
ಪುಟ್ಟ ಪುಕ್ಕಲು ಬೆಳಕು,
ವ್ಯರ್ಥದಲಿ, ಹೊನಲಿನಲಿ ಹರಿದು ಹೋಹುದ ಕಂಡೆ.

''ಕನ್ನಿಕೆಯೇ,
ನಿನ್ನ ದೀಪಗಳೆಲ್ಲ ಹತ್ತಿಕೊಂಡಿಹವು
ಆದರೂ ನಿನ್ನ ದೀಪವ ಕೊಂಡು ನೀನೆತ್ತ ನಡೆದಿರುವೆ ?
ನನ್ನ ಮನೆ ಕತ್ತಲಾಗಿಹುದು, ಏಕಾಂಗಿಯಾಗಿಹುದು
ಎರವಲಾಗಿ ನಿನ್ನ ಬೆಳಕನೀಯು'' ಎಂದು
ಕತ್ತಲು ಕವಿವ ನಿಶ್ಶಬ್ದ ವೇಳೆಯಲಿ, ಅವಳ ಕೇಳಿದೆನು.
ತನ್ನ ಕಪ್ಪು ಕಂಗಳನೆತ್ತಿ ಎನ್ನಮೊಗವ ನೋಡುತ್ತ
ಸಂಶಯದಿ ನಿಂತಳಾಕೆ. ಕೊನೆಗೆ ಮೌನವ ಮುರಿದು
''ಈ ದೀಪವನು, ಆಗಸಕೆ ಅರ್ಪಿಸಲು ಬಂದಿಹೆನು''
ಎಂದಳವಳು
ನಾನು ನಿಂತು, ಆ ದೀಪ,
ತೆರವಿನಲಿ, ವ್ಯರ್ಥದಲಿ ಉರಿವುದನು ಕಂಡೆ.

''ಕನ್ನಿಕೆಯೇ,
ನಿನ್ನ ಹೃದಯದ ಬಳಿ ಈ ದೀಪವ ಹಿಡಿದು
ಏನನರಸುತಿರುವೆ ?
ನನ್ನ ಮನೆ ಕತ್ತಲಾಗಿಹುದು, ಏಕಾಂಗಿಯಾಗಿಹುದು
ಎರವಲಾಗಿ ನಿನ್ನ ಬೆಳಕನೀಯು'' ಎಂದು
ಶಶಿಯಿರದ ನಟ್ಟಿರುಳ ಕತ್ತಲಲಿ ಕೇಳಿದೆನು.
ಅವಳು ನಿಂತಳರೆಚಣ,
ಕತ್ತಲಲಿ ದಿಟ್ಟಿಸಿ, ನೆಟ್ಟ ನೋಟದಲಿ ನೋಡಿದಳೆನ್ನ
''ದೀಪೋತ್ಸವದಲಿ ಪಾಲ್ಗೊಳ್ಳಲು
ನನ್ನ ದೀಪವನು ತಂದಿರುವೆ'' ಎಂದಳವಳು

ನಾನು ನಿಂತು,
ಬೆಳಕಿನಲಿ, ವ್ಯರ್ಥದಲಿ, ಆ ದೀಪ,
ಲಯವಾಗುವುದನು ಕಂಡೆ.

೭೫

ತುಂಬಿ ತುಳುಕುತಿಹ
ನನ್ನ ಬದುಕಿನ ಬಟ್ಟಲಿನಿಂದ
ಆವ ದಿವ್ಯ ಪೇಯವನು ನೀ ಪಡೆವೆ ದೇವಾ ?

ಓ ನನ್ನ ಕವಿಯೇ,
ನನ್ನ ಕಂಗಳಿಂದ ನಿನ್ನ ಕೃತಿಗಳ ನೀನೆ ನೋಡುವದು,
ನನ್ನ ಕಿವಿಯ ಹೆಬ್ಬಾಗಿಲಲಿ ಮೌನದಲಿ ನಿಂತು,
ನೀನೆ ಹೊರಡಿಸಿದ ಅನಂತ ಸ್ವರ ಮೇಳವನು, ಸವಿಯುವದು,
ನಿನ್ನ ಆಮೋದವೆ ?

ನಿನ್ನ ಜಗವು ನನ್ನ ಮನದೊಳು,
ಶಬ್ದಗಳ ಹೆಣೆಯುತಿಹುದು, ಮೇಣ್,
ನಿನ್ನ ಸಂತಸವು ಅವುಗಳಿಗೆ
ಇಂಪಾದ ನಾದವನೀಯುತಿಹುದು.
ನಲುಮೆಯಲಿ ನಿನ್ನನೇ ನೀನೆನಗೀಯುತಿಹೆ
ಮತ್ತೆ ನಿನ್ನೆಲ್ಲ ಸಿಹಿಯನು, ನನ್ನೊಳಗೆ ಸವಿಯುತಿಹೆ.

೬೬

ನನ್ನ ಅಸ್ತಿತ್ವದ ಆಳದಲಿ
ಮಿನುಗುತಿಹ ಮಣ್ಬೆಳಕಿನಲಿ
ಸದಾ ಇದ್ದಿರುವ ಆ, ಆಕೆಯನು
ಮುಂಜಾವಿನ ಹೊಂಬೆಳಕಿನಲಿ
ತನ್ನ ಮೊಗದ ಪರದೆಯನು ಸರಿಸದ ಆ ಆಕೆಯನು,
ನನ್ನ ಕೊನೆಯ ಹಾಡಿನಲಿ ಮುಚ್ಚಿ
ಅರ್ಪಿಸುವೆ ನಿನಗೆ.

ಶಬ್ದಗಳವಳ ಓಲೈಸಹೋದವು
ಆದರೆ, ಜಯಿಸದಾದವು ಅವಳ.
ಮನವೊಲಿಸುವ ವಿಧ ವ್ಯರ್ಥದಲಿ
ಆತುರತೆಯ ಕೈಯ ಚಾಚಿಹುದು.

ಎದೆಯ ಗರ್ಭದಿ, ಅವಳ ಹೊತ್ತು
ದೇಶ ದೇಶಗಳ ಅಲೆದು ಬಂದಿಹೆನು.
ಅವಳ ಸುತ್ತೇ, ನನ್ನ ಜೀವನದ
ವೃದ್ಧಿ ನಶಿಸುವಿಕೆಯನು ಅನುಭವಿಸಿ
ಮೇಲೇರಿಹೆನು, ಕೆಳಗೆ ಜಾರಿಹೆನು.

ನನ್ನ ಯೋಚನೆಗಳನು, ಕೃತಿಗಳನು,
ನನ್ನ ನಿದ್ರೆಯ ಕ್ಷಣಗಳನು, ಕನಸುಗಳನು
ಅವಳೇ ಆಳಿಹಳು, ಆದರೂ
ನನ್ನಿಂದ ಬೇರೆಯಾಗಿಹಳು, ಓರ್ವಳೇ ಇರುತಿಹಳು.

ಎನಿಬರೋ ನನ್ನ ಬಾಗಿಲನು ತಟ್ಟಿ
ಅವಳು ಬೇಕೆಂದು ಕೇಳಿ
ನಿರಾಶೆಯಲಿ ಮರಳಿದರು.

ಅವಳನು ಸಮಕ್ಷಮದಲಿ ನೋಡಿದವರು
ಈ ಜಗದೊಳಾರೂ ಇರರು.
ನೀನವಳನೊಪ್ಪಿಕೊಳಲೆಂದು
ಓರ್ವಳೇ ಏಕಾಂತದಲಿ ಕಾಯುತಿಹಳು.

೬೭

ನೀನೆ ಆಗಸವು, ನೀನೆ ಆಶ್ರಯದ ಗೂಡು.
ಓ, ನಯನ ಮನೋಹರನೆ,
ಆ ಗೂಡಿನಲಿ, ಆತ್ಮವನು,
ಬಣ್ಣಗಳಿಂದ ಶಬ್ದಗಳಿಂದ, ವಾಸನೆಗಳಿಂದ
ಸುತ್ತುವರಿದಿರುವದು ನಿನ್ನ ನಲ್ಮೆ.

ರಮಣೀಯತೆಯ ಹಾರವನು
ಹೊನ್ನ ಬುಟ್ಟಿಯಲಿಟ್ಟು ತನ್ನ ಬಲದ ಕೈಯಲಿ ಹಿಡಿದು
ಬುವಿಗೆ ಮುಕುಟವನಿರಿಸಲು
ಮೌನದಲಿ ಬರುವಳು ಉಷೆಯು.

ಪಡುವಣದ ಶಾಂತ ಸಾಗರದಿಂದ
ತಂಪಾದ ಶಾಂತಿಯ ಕುಡಿತ ತುಂಬಿದ

ಹೊನ್ನ ಹೂಜೆಯ ಹಿಡಿದು,
ಪಥವಿರದ ದಾರಿಯಲಿ,
ಮೃಗಗಳ ಹಿಂಡು ತೊರೆದಿರುವ,
ಏಕಾಂತದ ಹುಲ್ಲುಗಾವಲಿನ ಮೇಲೆ
ಬರುವಳು ನಿಶೆಯು.

ಆದರೆ, ಆತ್ಮದ ಹಾರುವಿಕೆಗಾಗಿ
ಹರಡಿಕೊಂಡಿರುವ ಅನಂತದಾಗಸವನ್ನು
ಕಣ್ಣುಕೋರೈಸುವ ಕಳಂಕರಹಿತ
ಶ್ವೇತ ಕಿರಣಗಳಾಳುತಿಹವು.
ಅಲ್ಲಿ ಹಗಲಿಲ್ಲ, ಇರುಳಿಲ್ಲ, ಬಣ್ಣವಿಲ್ಲ, ರೂಪವಿಲ್ಲ
ಮೇಣ್, ಶಬ್ದವೂ ಇಲ್ಲ.

೭೮

ನನ್ನ ಕಣ್ಣೀರಿನಿಂ, ನಿಟ್ಟುಸಿರಿನಿಂ, ಮೇಣ್ ಹಾಡುಗಳಿಂ
ರೂಪು ತಳೆದ ಮೋಡಗಳ
ನಿನ್ನಡಿಗಳಿಗೆ ಕೊಂಡೊಯ್ಯಲೋಸುಗವೇ
ನಿನ್ನ ಸೂರ್ಯ ರಶ್ಮಿಗಳು ಈ ನನ್ನ ಬುವಿಯ ಮೇಲಿಳಿದು
ತನ್ನ ಕೈಗಳ ಚಾಚಿ
ದಿನವಿಡೀ ನನ್ನ ಬಾಗಿಲಲಿ ನಿಲ್ಲುವವು.

ನಕ್ಷತ್ರ ಭರಿತ ನಿನ್ನೆದೆಯ ಸುತ್ತಲೂ
ಈ ಮಂಜಿನ ಮೋಡದ ಹೊದಿಕೆಯನು

ಅತಿ ಪ್ರೀತಿಯಿಂ ಧರಿಸಿ,
ಅದಕೆ, ಅಗಣಿತ ರೂಪಗಳ, ಹೊದಿಕೆಗಳ ಕೊಟ್ಟು
ಸದಾ ಬದಲಾಗುವ ಛಾಯೆಯ ಬಣ್ಣವನು ತುಂಬಿರುವೆ.

ಇದೆಷ್ಟು ಹಗುರ, ತೆಳು, ಸೂಕ್ಷ್ಮ, ಅಶ್ರುಭರಿತ ಮೇಣ್ ಕಪ್ಪು,
ಅಂತಲೇ, ಓ ನಿಷ್ಕಳಂಕ ಶಾಂತಮೂರ್ತಿಯೇ
ಇದರ ಮೇಲೆ, ನಿನಗೆನಿತು ಪ್ರೀತಿ.
ಅಂತಲೇ, ತನ್ನ ದುಃಖದ ಛಾಯೆಗಳಿಂದ
ನಿನ್ನ ಗಂಭೀರತೀಕ್ಷ್ಣ ಬಿಳಿಯ ಬೆಳಕನು
ಇದು ಮುಚ್ಚುತಿರಬಹುದು.

೬೯

ನನ್ನ ಧಮನಿಗಳಲಿ ಅಹರ್ನಿಶಿ
ಹರಿಯುತಿಹ ಪ್ರಾಣ ಚೇತನದ ಹೊಳೆಯೇ
ಜಗದ ತುಂಬೆಲ್ಲ ಹರಿದು
ಸಮರಸದ ನರ್ತನವ ನರ್ತಿಸುತಲಿಹುದು.

ಆ ಪ್ರಾಣಚೇತನವೇ, ಬುವಿಯ ಧೂಳಿನೊಳಗಿಂದ
ಹುಲ್ಲಿನ ಅಗಣಿತ ಗರಿಗಳಲಿ ಹೊರಗೆಸೆದು
ಎಸಳಿನ ತಳಮಳಿಸುವ ತೆರೆಯಾಗಿ, ಮೇಣ್
ಹೂವಾಗಿ ಹೊರಹೊಮ್ಮುವುದು.

ಆ ಪ್ರಾಣಚೇತನವೇ
ಹುಟ್ಟು ಸಾವಿನ ಸಾಗರದ

ಉಬ್ಬರಿಳಿತದ ಪ್ರವಾಹದ ತೊಟ್ಟಿಲಲಿ
ತೂಗಲ್ಪಡುತಲಿಹುದು.

ಈ ಪ್ರಾಣಚೇತನದಿಂದ ತುಂಬಿದ ಜಗದ ಸ್ಪರ್ಶವೇ
ನನ್ನಂಗಗಳಿಗೆಲ್ಲ ವೈಭವವ ತಂದಿಹುದನು,
ಅನುಭವಿಸುತಿಹೆನು, ಮೇಣ್,
ಯುಗ ಯುಗಗಳ, ಪ್ರಾಣ ಚೇತನದ
ತುಡಿತಗಳೊಳಗಿಂದ ಬಂದ ನನ್ನ ಹೆಮ್ಮೆ
ಈ ಚಣದಿ ನನ್ನ ನೆತ್ತರಲಿ ನರ್ತಿಸುತಲಿಹುದು.

## ೭೦

ಈ ವಿಶ್ವದ ಸಾಮರಸ್ಯದಾನಂದದಲಿ ಒಂದಾಗಿ
ಆನಂದ ತುಂದಿಲನಾಗಿರುವದು ನಿನ್ನಳವಿನಲ್ಲಿಲ್ಲವೆ?
ಈ ಭಯಾನಕದಾನಂದದ ಭೋರ್ಗರೆವ ಸುಳಿಯಲಿ
ಅತ್ತಿತ್ತಲೆಸೆಯಲ್ಪಟ್ಟು, ಮುರಿಯಲ್ಪಟ್ಟು
ನಿನ್ನನೇ ನೀ ಕಳಕೊಂಡು
ಆನಂದ ಹೊಂದುವದು ನಿನ್ನಳವಿನಲ್ಲಿಲ್ಲವೆ ?

ಎಲ್ಲ ವಸ್ತು ವಿಷಯ ಸಂಗತಿಗಳು ಮುನ್ನುಗ್ಗುತಿಹವು,
ನಿಲ್ಲುವವು, ಹಿಂದಕೆ ನೋಡವವು.
ಆವ ಶಕ್ತಿಯೂ ಅವನು ತಡೆಯಲಾರದು.
ಅವು ಮುನ್ನುಗ್ಗುತಿಹವು.

ಋತುಗಳು, ಈ ಕ್ಷಿಪ್ರ ಗತಿಯ, ತಳಮಳಿಸುವ ತಾಳಕೆ
ಹೆಜ್ಜೆ ಹಾಕುತ ನೃತ್ಯಗೈಯುತ ಬಂದು ಮರೆಯಾಗುವವು.
ಬಣ್ಣಗಳು, ರಾಗಗಳು, ಸುಗಂಧ ದ್ರವ್ಯಗಳು
ಜಲಪಾತದೋಪಾದಿಯಲಿ ಸುರಿದು,
ತುಂಬಿ ತುಳುಕುವ ಆನಂದವು ಪರಿದು,
ತುಂಬೆಲ್ಲ ಪಸರಿಸಿ,
ಪ್ರತಿ ಚಣವು ತೊರೆಯಲ್ಪಟ್ಟು ಕೊನೆಗಾಣುತಿಹುದು.

೭೧

ನನ್ನ ಹಮ್ಮನೆ ಬೆಳೆಸಿ ಸುತ್ತೆಲ್ಲ ಹೊರಳಿಸಿ
ಕಣ್ಣು ಕೋರೈಸುವ ನಿನ್ನ ಕಿರಣಗಳ ಮೇಲೆ,
ನನ್ನ ಬಣ್ಣಗಳ ಛಾಯೆಯನು ಮೂಡಿಸುವ ಚಪಲವೆನಗೆ
ಇಂತಿಹುದು ನಿನ್ನ ಮಾಯೆ.

ನಿನ್ನಿರುವಿನೊಳಗೆ, ನೀನೆ ತಡೆಗಳ ಬೆಳೆಸಿ
ನೀನೆ ನೂರಾರು ಸಾವಿರಾಗಿ
ಅಗಣಿತ ಹೆಸರಿನಿಂ ನಿನ್ನ ನೀನೇ ಕರೆದುಕೊಂಡಿರುವೆ.
ಇಂತು ನಿನ್ನಿಂದ ಬೇರಾದ ತುಣುಕೊಂದು
ನಾನಾಗಿರುವೆನಿಲ್ಲಿ.

ಹೃದಯವನು ಸ್ಪರ್ಶಿಸುವ ಹಾಡು,
ಎನಿತೋ ಕಣ್ಣೀರ ಹನಿಯಾಗಿ, ನಗುವಾಗಿ
ಎಚ್ಚರಿಕೆಯ ಧ್ವನಿಯಾಗಿ, ಆಶೆಯ ನೆಲೆಯಾಗಿ

ಆಗಸದ ತುಂಬೆಲ್ಲ ಮಾರ್ದನಿಸುತಿಹುದು.
ತೆರೆಗಳೇಳುತಿವೆ, ಮತ್ತೆ ಬೀಳುತಿವೆ
ಕನಸುಗಳೊಡೆಯುತಿವೆ, ಮೈದಳೆಯುತಿವೆ
ನನ್ನೊಳಗೇ ಇಹುದು ನಿನ್ನ ಸೋಲು.

ನೀನೆ ಸೃಷ್ಟಿಸಿದ ಈ ಪರದೆಯ ಮೇಲೆ
ಹಗಲು ರಾತ್ರಿಗಳ ಕುಂಚಗಳ ಬಳಸಿ
ಅಗಣಿತ ಆಕೃತಿಗಳ ಚಿತ್ರಿಸಿರುವೆ.
ಅದರಾಚೆಗೆ,
ನೇರವಾದ ಬರಡು ಗೆರೆಗಳ ತೊರೆದು
ಬೆರಗುಗೊಳಿಸುವ ಗೂಢ, ಅಂಕುಡೊಂಕಿನ ಗೆರೆಗಳಲಿ
ಹೆಣೆದ ನಿನ್ನಾಸನವಿಹುದು.

ನಮ್ಮೀರ್ವರನೊಳಗೊಂಡ ಭವ್ಯ ನೇತ್ರೋತ್ಸವವು
ಆಗಸದ ತುಂಬೆಲ್ಲ ಪಸರಿಸಿಹುದು.
ನಾನು ನೀನಿನ ರಾಗದಿಂದ ಪರಿಸರವೆಲ್ಲವೂ ಕಂಪಿಸುತಿಹುದು.
ನನ್ನ ನಿನ್ನ ಕಣ್ಣು ಮುಚ್ಚಾಲೆಯಾಟದಲಿ
ಯುಗ ಯುಗಗಳು ಸರಿಯುತಿಹವು.

೭೨

ತನ್ನ ಗೌಪ್ಯ ಆಳವಾದ ಸ್ಪರ್ಶಗಳಿಂದ
ನನ್ನಿರುವನೆಚ್ಚರಿಸುವಾತ,
ಆತನೇ, ನನ್ನ ಹೃದಯಾಂತರಾಳದಲ್ಲಿರುವಾತ.

ಈ ಕಂಗಳ ಮೇಲೆ, ತನ್ನ ಮೋಹಮಂತ್ರನೆಸೆದು
ಸುಖ ದುಃಖಗಳ ಏರಿಳಿತದ ಸ್ವರಲಯವ ಹೊರಡಿಸಿ
ನನ್ನ ಹೃದಯದ ತಂತಿಗಳ ಮಿಡಿದು
ಆನಂದದಲಿ ನುಡಿಸುವಾತ,
ಆತನೇ, ನನ್ನ ಹೃದಯಾಂತರಾಳದಲ್ಲಿರುವಾತ.

ಮನ ಸೆಳೆವ ಅಗಣಿತ ಬಣ್ಣಗಳ ಬಳಸಿ
ಮಾಯೆಯ ಬಲೆಯ ಹೆಣೆದು,
ಬಲೆಯ ಸಂದಿನೊಳಗಿಂದ, ತನ್ನ ಪಾದ ದರ್ಶನವ ನೀಡಿ
ನನ್ನನೇ ನಾ ಮರೆವಂತೆ ಮಾಡುವಾತ
ಆತನೆ, ನನ್ನ ಹೃದಯಾಂತರಾಳದಲ್ಲಿರುವಾತ.

ದಿನಗಳಳಿಯುತಿವೆ, ಯುಗಗಳುರುಳುತಿವೆ
ಆವದೋ ಹೆಸರಿನಲಿ, ಆವದೋ ರೂಪದಲಿ
ಎನಿತೋ ಸುಖ ದುಃಖಗಳ ಭಾವಾವೇಶದಲಿ
ನನ್ನ ಹೃದಯವನು ಸದಾ ಕದಲಿಸುತಿರುವಾತ,
ಆತನೇ, ನನ್ನ ಹೃದಯಾಂತರಾಳದಲ್ಲಿರುವಾತ.

## ೭೩

ಮುಕ್ತಿ ನನಗೆ ತ್ಯಾಗದೊಳಗಿಲ್ಲ
ಸಾವಿರಾರು ಆನಂದದ ಬಂಧನಗಳಲಿ
ಮುಕ್ತಿಯ ಅಪ್ಪುಗೆಯನು ಅನುಭವಿಸುತಿಹೆನು ನಾನು.

ಮನ ಸೆಳೆವ ಬಣ್ಣದ, ಘಮಘಮಿಸುವ,
ನಿನ್ನ ಹೊಸಪೇಯವನು ಸುರಿಯುತ್ತ
ಈ ಮಣ್ಣ ಮಡಿಕೆಯನು
ಸದಾ ತುಂಬಿಸುತ್ತಿರುವೆ.

ನಿನ್ನಿಂದ ಪಡೆದ ಉರಿಯಿಂದಲೇ
ನನ್ನ ಜಗವು, ನೂರಾರು ರೀತಿಯ ದೀಪಗಳ ಬೆಳಗಿಸಿ,
ನಿನ್ನ ಗುಡಿಯ ಯಜ್ಞವೇದಿಯ ಮುಂದೆ ಅವನಿರಿಸುತಿಹುದು.

ನನ್ನಿಂದ್ರಿಯಗಳ ಬಾಗಿಲುಗಳ ನಾ ಮುಚ್ಚಲಾರೆ.
ನನ್ನ ನೋಟ, ಶ್ರವಣ, ಸ್ಪರ್ಶದಾನಂದಗಳು
ನಿನ್ನದೇ ಆನಂದಗಳಾಗಿಹವು.

ನನ್ನೆಲ್ಲ ಭ್ರಮೆಗಳು ಉರಿಯುತ್ತ
ಆನಂದದ ಪ್ರಕಾಶ ಬೆಳಗುವದು.
ನನ್ನೆಲ್ಲ ಆಶೆಗಳು ಮಾಗಿ
ನಲ್ಮೆಯ ಹಣ್ಣುಗಳಾಗುವವು, ಮೇಣ್,
ಹೃದಯದ ತುಂಬ ಪ್ರೇಮರಸ ತುಂಬುವದು.

೭೪

ದಿನವು ಕಳೆದಿಹುದು, ಬುವಿಯ ಮೇಲೆ,
ಮುಚ್ಚಂಜೆಯ ಮುಸುಕು ಬಿದ್ದಿಹುದು.

ನನ್ನ ಹೂಜೆಯನು ತುಂಬಿಕೊಳೆ
ನಾನು-ತೊರೆಗೆ ಹೋಗುವ ಸಮಯ ಬಂದಿಹುದು.

ಹರಿವ ತೊರೆಯ ಖಿನ್ನ ಕಲರವದೊಡಗೂಡಿ
ಸಂಜೆಯಗಾಳಿ ಉತ್ಸುಕತೆಯಲಿಹುದು.
ಆಹ್, ಅದು ನನ್ನನು
ಮುಂಗತ್ತಲೊಳಕೆ ಕರೆಯುತಿಹುದು.
ಈ ನಿರ್ಜನದೇಕಾಂತದ ದಾರಿಯಲಿ
ಗಾಳಿ ಬೀಸುತಲಿದೆ, ನದಿಯ ಕಿರುದೆರೆಗಳು ಆವೇಶದಲಿಹವು.

ನಾನು ಮನೆಗೆ ಮರಳುವೆನೋ ಇಲ್ಲವೋ,
ನಾನರಿಯೆ. ಆರನಿಲ್ಲಿ ಕಾಂಬೆನೋ, ನಾನರಿಯೆ.
ಅಲ್ಲಿ, ನದಿಯ ಆಳವಿಲ್ಲದ ನೀರಿನಲಿ,
ಚಿಕ್ಕ ದೋಣಿಯಲಿ, ವೀಣೆಯನು ಬಾರಿಸುತ
ಅಪರಿಚಿತನೊಬ್ಬನು ಕುಳಿತಿರುವನು.

೭೫

ನೀನೆಮಗೆ ಕೊಟ್ಟ ಕೊಡುಗೆಗಳು
ಈ ಮರ್ತ್ಯ ಮಾನವರ ಕೊರತೆಗಳ ನೀಗಿ,
ಕುಂದದೇ, ಮತ್ತೆ ನಿನ್ನೆಡೆಗೇ ಮರಳುವವು

ತನ್ನ ನಿತ್ಯ ಕರ್ಮವನೆಸಗೆ
ಹಳ್ಳಿಗಳಲಿ, ಹೊಲಗಳಲಿ, ಹರಿವುದು ನದಿ ಅವಸರದಿ.

ಆದರೂ, ಅದರ ನಿರಂತರ ಓಘ
ನಿನ್ನ ಪಾದ ಕಮಲಗಳ ತೊಳೆವುದಕಾಗಿಯೇ.

ಹೂವು, ಗಾಳಿಯಲಿ ತನ್ನ ಕಂಪನು ಹರಡಿ
ಸವಿಗೊಳಿಪುದು ಪರಿಸರವ, ಆದರೂ,
ಅದರ ಅಂತಿಮ ಸೇವೆ,
ತನ್ನನೇ ನಿನ್ನಡಿಗರ್ಪಿಸಿಕೊಳುವದು.
ನಿನ್ನ ಪೂಜೆ, ಈ ಜಗಕೆ ಕೊರತೆಯನು ತರದು.

ಕವಿಯ ನುಡಿಗಳಿಂ ಜನರು
ತಂತಮ್ಮ ಮನಕೆ, ಮುದಕೊಡುವ ಅರ್ಥಗಳ ಪಡೆವರು,
ಆದರೂ,
ಅವುಗಳ ಅಂತಿಮ ಅರ್ಥ,
ನಿನ್ನನೇ ತೋರುವದು.

೭೬

ಓ ನನ್ನ ಬದುಕಿನೊಡೆಯನೇ
ಓ ಸರ್ವ ಜಗಂಗಳೊಡೆಯನೇ
ದಿನಗಳೆದು ದಿನ ಬರಲು,
ನಿನ್ನೆದುರು ಕೈಮುಗಿದು ನಿಲ್ಲುವೆನು ನಾನು.

ಈ ಬೃಹದಾಕಾಶದಡಿಯಲಿ,
ಓ ಸರ್ವ ಜಗಂಗಳೊಡಯನೇ,

ದಿನಗಳೆದು ದಿನ ಬರಲು,
ನಿನ್ನೆದುರು ಕೈಮುಗಿದು ನಿಲ್ಲುವೆನು ನಾನು.

ಈ ನಿನ್ನ ಪ್ರಯಾಸತುಂಬಿದ ಜಗದಲಿ,
ತುಮುಲ ತುಂಬಿದ ಹೋರಾಟವ ಗೈಯುತ್ತ
ಗಡಬಡಿಸಿ ಓಡುತಿಹ ಜನಜಂಗುಳಿಯಲಿ,
ನಿನ್ನೆದುರು ಕೈಮುಗಿದು ನಿಲ್ಲುವೆನು ನಾನು.

ಓ ರಾಜರ ರಾಜನೇ,
ಈ ಜಗದಲಿ, ನನ್ನ ಕೆಲಸವು ಪೂರ್ತಿಗೊಂಡಾಗ
ಏಕಾಂಗಿಯಾಗಿ, ನಿನ್ನೆದುರು ಮೌನದಲಿ ನಿಲ್ಲುವೆನು ನಾನು.

೭೭

ನೀನೆನ್ನ ದೈವವೆಂದು ಬಗೆದು, ನಿನ್ನಿಂದ ದೂರ ನಿಲುವೆ.
ನೀನೆನ್ನ ಆತ್ಮೀಯನೇ, ಎಂದರಿಯಲಾರದೇ
ನಿನ್ನ ಸನಿಹಕ್ಕೆ ಸರಿಯಲಾರೆ.
ನೀನೆನ್ನ ತಂದೆಯಂದರಿದು, ನಿನ್ನಡಿಗಳಿಗೆರಗುವೆನು,
ಆದರೆ, ನನ್ನ ಗೆಳೆಯನ ಕೈಹಿಡಿವಂತೆ
ನಿನ್ನ ಕೈ ಹಿಡಿಯಲಾರೆ.

ಆವ ತಾಣಕೆ ನೀ ಬಂದು, ನನ್ನನು
ನಿನ್ನವನೇ ಎಂದೊಪ್ಪಿಕೊಳ್ಳ ಬಲ್ಲೆಯೋ,
ಎಲ್ಲಿ ನಾನು ನನ್ನೊಡನಾಡಿಯೆಂದು

ನಿನ್ನನು ನನ್ನೆದೆಗೊತ್ತಿಕೊಳ್ಳ ಬಲ್ಲೆನೋ
ಆ ತಾಣದಲಿ ನಾನಿಲ್ಲವೈ.

ನೀನೆನ್ನ ಸೋದರರರೊಳಗೊಬ್ಬನೆಂದು ಬಗೆದು,
ನನ್ನ ಗಳಿಕೆಗಳನು, ಎಲ್ಲ ಸೋದರರರೊಡನೆ ಹಂಚಿಕೊಳದೆ,
ನಿನ್ನೊಡನೆ ಮಾತ್ರ ಅವುಗಳನು ಹಂಚಿಕೊಳುವೆ.

ನೋವಿನಲಿ, ನಲಿವಿನಲಿ, ಜನರೊಡನೆ ನಿಲ್ಲದೇ
ನಿನ್ನೊಡನೆ ನಿಲ್ಲುವೆನು.
ನನ್ನ ಜೀವವನೆ ತೊರೆವಷ್ಟು ಕುಗ್ಗುವೆನು ಅಂತಲೇ
ಜೀವನದ ಮಹಾ ನೀರಿನಲಿ ಧುಮುಕೆ ನಾನು.

೭೮

ಈ ವಿಶ್ವ ಸೃಷ್ಟಿಯು ಮುಗಿದು
ತಾರೆಗಳೆಲ್ಲ ಭವ್ಯತೆಯಲಿ ಹೊಳೆದಾಗ
ದೇವತೆಗಳೆಲ್ಲ ಗಗನದಲಿ ಸೇರಿ ಹಾಡಿದರಾಗ –
''ಓಹ್ ಪರಿಪೂರ್ಣತೆಯ ಚಿತ್ರ! ಕುಂದಿರದ ಆನಂದ!''

ಆದರೊಂದು ಧ್ವನಿ ಕೂಗಿತು
''ಬೆಳಕಿನ ಕೊಂಡಿ ಎಲ್ಲಿಯೋ ಕಡಿದಿಹುದು
ತಾರೆಯೊಂದು ಕಳೆದುಕೊಂಡಿಹುದು''

ದೈವ ವೀಣೆಯ ಹೊನ್ನ ತಂತಿಯು ಕಡಿದು
ದೇವತೆಗಳು ಹಾಡನು ನಿಲಿಸಿ

ದಿಗಿಲಿನಲಿ ಕೂಗಿದರಾಗ –
"ಅಹುದು ಕಳೆದಿರುವದು ಅತಿ ಶ್ರೇಷ್ಠ ತಾರೆ
ಅವಳೆ ಸ್ವರ್ಗಗಳ ಹೆಮ್ಮೆ, ಪ್ರತಿಷ್ಠೆ"

ಅಂದಿನಿಂದ, ನಡೆದಿಹುದು ಬಿಡುವಿರದ ಹುಡುಕಾಟ
ದುಃಖದಲಿ ಉಸುರುತಿಹರು ಒಬ್ಬರಿನ್ನೊಬ್ಬರಿಗೆ
"ಆ ತಾರೆಯ ಕಣ್ಮರೆಯಲಿ
ಜಗವು ಕಳೆದುಕೊಂಡಿಹುದೊಂದು ಆನಂದವನು".

ನಟ್ಟಿರುಳ ಗಾಢ ಮೌನದಲಿ ಮಾತ್ರ
ತಮ್ಮ ತಮ್ಮೊಳಗೆ, ತಾರೆಗಳು ನಸು ನಗುತ
ಪಿಸುಮಾತಿನಲಿ ಮಾತನಾಡಿಕೊಳುತಿಹವು
"ವ್ಯರ್ಥವೀ ಹುಡುಕಾಟ,
ಒಟ್ಟಿನಲಿ ಕುಂದಿರದ ಪರಿಪೂರ್ಣತೆಯಿಹುದು."

೭೯

ನಿನ್ನ ದರುಶನ ಭಾಗ್ಯ ಈ ಜೀವನದಿ ನನಗಿಲ್ಲದಿರೆ,
ನಿನ್ನ ನೋಟದಿಂ, ನಾನು ವಂಚಿತನಾದೆನೆಂದು ಭಾವಿಸಿ,
ನಿನ್ನನರೆಚಣವು ನಾನು ಮರೆಯದಿರಲಿ,
ನನ್ನ ಜಾಗೃತಿಯಲಿ ಮೇಣ್ ಕನಸಿನಲಿ
ಈ ದುಃಖವು ನನ್ನೆದೆಯೊಳು,
ಸದಾ ತುಂಬಿಕೊಂಡಿರಲಿ.

ಈ ಜಗದ ಜನಜಂಗುಳಿಯಲಿ
ನನ್ನ ದಿನಗಳು ಸವೆಯುತಿರುವಾಗ,
ನನ್ನ ಕೈಗಳಲಿ ದಿನದಿನವು ಗಳಿಕೆ ಹೆಚ್ಚುತ್ತಿರುವಾಗ,
ನಾನೇನೂ ಪಡೆದಿಲ್ಲ ಎಂಬರಿವು ನನಗಿರಲಿ,
ಇದನು ಅರೆ ಚಣವು ನಾ ಮರೆಯದಿರಲಿ,
ನನ್ನ ಜಾಗೃತಿಯಲಿ ಮೇಣ್ ಕನಸಿನಲಿ
ಈ ದುಃಖವು ನನ್ನೆದೆಯೊಳು
ಸದಾ ತುಂಬಿಕೊಂಡಿರಲಿ.

ದಣಿದು ಏದುತ್ತ ಹಾದಿಬದಿಯಲಿ ಕುಳಿತಾಗ
ನನ್ನ ಹಾಸನು ಧೂಳಿನಲಿ ಹಾಸಿದಾಗ
ದೂರದ ಪಯಣ, ಇನ್ನೂ ಮುಂದಿರುವ ಅರಿವಿರಲಿ,
ಇದನು ಅರೆಚಣವು ನಾ ಮರೆಯದಿರಲಿ,
ನನ್ನ ಜಾಗೃತಿಯಲಿ ಮೇಣ್ ಕನಸಿನಲಿ
ಈ ದುಃಖವು ನನ್ನೆದೆಯೊಳು
ಸದಾ ತುಂಬಿಕೊಂಡಿರಲಿ.

ನನ್ನ ಕೋಣೆಗಳು ಸಿಂಗರಗೊಂಡು
ಕೊಳಲ ಧ್ವನಿ ಮೇಣ್ ಎತ್ತರದ ಧ್ವನಿಯ ನಗೆಗಳು ತುಂಬಿದಾಗ,
ನಿನ್ನನು ನಾ ಆಮಂತ್ರಿಸಿಲ್ಲ, ಎಂಬರಿವು ನನಗಿರಲಿ,
ಇದನು ಅರೆ ಚಣವು ನಾ ಮರೆಯದಿರಲಿ,
ನನ್ನ ಜಾಗೃತಿಯಲಿ ಮೇಣ್ ಕನಸಿನಲಿ
ಈ ದುಃಖವು ನನ್ನೆದೆಯೊಳು ಸದಾ ತುಂಬಿಕೊಂಡಿರಲಿ.

೮೦

ಶರತ್ಕಾಲದ ಆಗಸದಿ
ಗೊತ್ತುಗುರಿ ಇಲ್ಲದೇ
ಅಂಡಲೆವ ಬಿಳಿ ಮುಗಿಲ ತುಣುಕು ನಾನು.
ಪ್ರಕಾಶಮಾನನಾದ ಓ ನನ್ನ ಸೂರ್ಯನೇ
ನಿನ್ನ ಶಾಖ, ನನ್ನ ಮಂಜನಿನ್ನೂ ಕರಗಿಸಿಲ್ಲ,
ನಿನ್ನ·ಬೆಳಕಿನೊಡನಿನ್ನೂ
ನಾ ಒಂದಾಗಲಿಲ್ಲ.
ಇಂತು ಬೇರ್ಪಟ್ಟ ನಾನು
ನಿನ್ನ ಕೂಡುವಿಕೆಗಾಗಿ
ಮಾಸಗಳ ವರುಷಗಳ ಎಣಿಸುತಿಹೆನು.

ಇದೆ ನಿನ್ನ ಇಚ್ಛೆಯಾಗಿರೆ
ಇದೆ ನಿನ್ನ ಆಟವಾಗಿರೆ
ಕ್ಷಣಿಕವಾದ ನನ್ನ ಮನದ ತೆರೆವನೆತ್ತಿಕೋ-ಮೇಣ್,
ಅದಕೆ ಬಣ್ಣಗಳ ತುಂಬಿ, ಬಂಗಾರದ ಗೆರೆ ಕೊರೆದು,
ಚೆಲ್ಲುಚೆಲ್ಲಾಗಿಹ ಗಾಳಿಯಲಿ ಹರಿಬಿಟ್ಟು
ಚಿತ್ರ ವಿಚಿತ್ರಗಳ ವಿಸ್ಮಯಗಳ ಪಸರಿಸು.

ಮತ್ತೆ ಇರುಳಿನಲಿ, ಈ ಆಟಕ್ಕೆ
ತೆರೆಯನೆಳೆಯುವದು ನಿನ್ನ ಇಚ್ಛೆಯೆ.
ಆಗ ರಾತ್ರಿಯ ಕತ್ತಲಿನಲಿ
ಕರಗಿ ಹೋಗುವೆ ನಾನು, ಇಲ್ಲವೆ.

ತಂಪಾದ ಪರಿಶುದ್ಧ ಬಿಳಿಯ ಬೆಳಗಿನ
ಮಂದಸ್ಮಿತವಾದೇನು.

೮೧

ಅಲಸಿಯಾಗಿ ಕಳೆದ ದಿನಗಳಿಗಾಗಿ ಎನಿತೋ ಮರುಗಿದೆನು
ಆದರೆ ನನ್ನೊಡೆಯ, ಕಳೆದಿರದು ಏನೊಂದೂ.
ನನ್ನ ಜೀವನದ ಪ್ರತಿಯೊಂದು ಚಣವನು
ನಿನ್ನ ಕೈಗಳಲಿ ಹಿಡಿದಿರುವೆ ನೀನು.

ವಸ್ತು ಸಂಗತಿಗಳ ಹೃದಯದಲಿ ಹುದುಗಿ
ತರುವೆ ಮೊಳಕೆಗಳ ಬೀಜಗಳಲಿ.
ಮೊಗ್ಗ ಹಿಗ್ಗಿಸಿ ಹೂಗಳನರಳಿಸುವೆ,
ಹೂಗಳ ಮಾಗಿಸಿ ಹಣ್ಣುಗಳನಾಗಿಸುವೆ.

ನಾ ದಣಿದು ಕ್ರಿಯೆದೊರೆದು
ಹಾಸಿಗೆಯ ಮೇಲೊರಗಿ
ನನ್ನೆಲ್ಲ ಕೆಲಸವು ಮುಗಿದಿಹುದೆಂದು ಬಗೆದೆ,
ಬೆಳಗಾಗಿ ನಾನೇಳೆ
ವಿಸ್ಮಯದ ಕುಸುಮಗಳು
ನನ್ನ ತೋಟದಲಿ ಅರಳಿಹುದ ಕಂಡೆ.

## ೮೨

ನಿನ್ನ ಕೈಗಳಲಿ ವೇಳೆ ಅನಂತವಾಗಿಹುದು ನನ್ನೊಡೆಯ,
ನಿನ್ನೊಳಿಹ ಚಣಗಳನು ಎಣಿಸಬಲ್ಲವರಾರು?

ಹಗಲುಗಳುರುಳುವವು ರಾತ್ರಿಗಳಳಿಯುವವು
ಹೂಗಳಂದದಿ ಯುಗಗಳರಳುವವು, ಮುರಟುವವು
ಕಾಯ್ದು ನೋಡುವ ಕಲೆಯ ನೀ ಬಲ್ಲೆ ಒಡೆಯ.

ಈ ಸಣ್ಣ ವನಸುಮವ
ಪರಿಪೂರ್ಣತೆಗೊಯ್ಯಲು
ನಿನ್ನ ಶತಮಾನಗಳುರುತಿಹವು.

ಹರಣಗೈವಷ್ಟು ನಮಗಿಲ್ಲ ಸಮಯ.
ಅಂತಲೇ, ದೊರಕುವದ ದೋಚಿಕೊಳೆ
ಪರದಾಡುತಿರಬೇಕು.
ವ್ಯರ್ಥಕಾಲ ಕಳೆವಷ್ಟು ಧನಿಕರಲ್ಲ ನಾವು.

ತನ್ನದಿದು ಎಂಬ ಪ್ರತಿ ಜಗಳಗಂಟನಿಗೆ
ನನ್ನ ಸಮಯವ ಕೊಟ್ಟೆ, ಕಾಲನುರಿಳಿದ ಮುಂದೆ
ಎಲ್ಲ ಕಾಣಿಕೆಗಳು ಮುಗಿದು, ಕೊನೆಗೆ
ನಿನ್ನ ಯಜ್ಞವೇದಿಕೆಯು ಬರಿದಾಗಿಹುದು.

ದಿನದ ಕೊನೆಗೆ, ನಿನ್ನ ಬಾಗಿಲು ಮುಚ್ಚಬಹುದೆಂಬ
ಭೀತಿಯಲಿ ಗಡಬಡಿಸಿ ಓಡುವೆನು.

ಆದರೂ ಇನ್ನೂ ಸಾಕಷ್ಟು ಸಮಯ
ಇರುವುದನು ಅರಿವೆ.

೮೩

ತಾಯೆ!
ದುಃಖದಿಂ ಒತ್ತರಿಸಿ ಹರಿವ
ನನ್ನ ಕಣ್ಣೀರ ಹನಿ ಮುತ್ತುಗಳಿಂದ
ನಿನ್ನ ಕೊರಳಸರವನು ಹೆಣೆವೆ.

ರಾತ್ರಿಯಾಗಸದೊಳಾಗಲೇ
ಹೊಳಪಿನಿಂ ಕಂಗೊಳಿಸುತಿಹುದು,
ನಿನ್ನ ಚರಣಗಳ ಸಿಂಗರಿಸೆ–ನಕ್ಷತ್ರ ಮಾಲೆ.
ನನ್ನದೋ –
ತೂಗಾಡಿ ಮೆರವುದಭಿಮಾನದಿಂ
ನಿನ್ನೆದೆಯ ಮೇಲೆ.

ಇಂದಾಗಲೆನ್ನೊಳಿಹ
ಕೀರ್ತಿ ಧನಿಕತೆಗಳೆಲ್ಲವೂ ನಿನ್ನವೇ.
ನಿನ್ನಧಿಕಾರವದು –
ಅವುಗಳನೆನಗೀಯ್ವುದು, ಈಯ್ವುದಿರದೇ ಇಹುದು.
ಆದರಿಂದು,
ನಾನೀಯಲೆಳೆಸಿಹ ದುಃಖ, ಎಲ್ಲವೂ ನನ್ನದೆ,
ನಿನಗಧಿಕಾರವದರೊಳಿನಿತಾದರೂ ಇರದು.

ಇದನು, ನಾನಿನಗಿತ್ತೆಂದು, ನಾ ಬಲ್ಲೆ ತಾಯೆ,
ಮತ್ತೆ ನೀನೆನಗೀವೆ
ಅನುಪಮದ ಕಾರುಣ್ಯ ದಯಗಳನು.

## ೮೪

ನಿನ್ನಗಲಿಕೆಯ ವಿರಹ ವೇದನೆಯೆ
ಜಗದ ತುಂಬೆಲ್ಲ ಪಸರಿಸಿ,
ಅನಂತ ಆಗಸದಿ ಅಗಣಿತ ಆಕೃತಿಗಳ ರಚಿಸಿರುವದು –
ದೊರೆಯೆ.

ಇರುಳೆಲ್ಲ ಮೌನದಲಿ ತಾರೆಗಳ ನೋಡುತ್ತ, ಮೇಣ್
ಶ್ರಾವಣದ ರಾತ್ರಿಯಲಿ ಸುರಿವ ಮಳೆಯಲ್ಲಿ
ಎಲೆಗಳ ಮರ್ಮರದಿ ಉದಯಿಸುವ ಗೀತೆಗಳು
ನಿನ್ನಗಲಿಕೆಯ ವಿರಹ ವೇದನೆಯೆ ದೊರೆಯೆ.

ತುಂಬೆಲ್ಲ ಪಸರಿಸಿಹ ಅಗಲಿಕೆಯ ವೇದನೆಯೆ
ಬಲವಾಗಿ, ತೃಷೆಯಾಗಿ, ಮನುಜರ ಮನೆಗಳಲಿ
ನೋವಾಗಿ ನಲಿವಾಗಿ ರೂಪುಗೊಂಡಿಹುದು.
ಈ ವೇದನೆಯೆ ಕರಗಿ,
ನನ್ನ ಕವಿಯ ಹೃದಯದೊಳಗಿಂದ
ಹಾಡುಗಳಾಗಿ ಹೊರಹೊಮ್ಮುತಿಹುದು.

೮೫

ಯೋಧರು ತಮ್ಮೊಡೆಯನ ತಾಣವನು
ಮೊಟ್ಟಮೊದಲು ಬಿಟ್ಟು ಹೊರಬಂದಾಗ
ತಮ್ಮ ಶಕ್ತಿಯನೆಲ್ಲಿ ಬಚ್ಚಿಟ್ಟಿದ್ದರು?
ಎಲ್ಲಿದ್ದವವರ ಶಸ್ತ್ರಗಳು? ಯುದ್ಧ ಕವಚಗಳು?

ತಮ್ಮೊಡೆಯನ ತಾಣವನು ಬಿಟ್ಟು ಬಂದ ದಿನ
ನಿಸ್ಸಹಾಯಕರಂತೆ ಕಂಡರವರು,
ಬಾಣಗಳ ಮಳೆ ಸುರಿಯಿತವರ ಮೇಲೆ.

ತಮ್ಮೊಡೆಯನ ತಾಣಕೆ ಮತ್ತೆ ಮರಳಿದಾಗ
ತಮ್ಮ ಶಕ್ತಿಯನೆಲ್ಲಿ ಬಚ್ಚಿಟ್ಟಿದ್ದರವರು?

ತಮ್ಮ ಖಡ್ಗ ಮೇಣ್ ಬಿಲ್ಲು ಬಾಣಗಳ
ತೊರೆದಿಹರು ಅವರು, ಶಾಂತಿ ಬೆಳಗಿಹುದು ನೊಸಲಿನಲಿ.
ತಮ್ಮೊಡೆಯನ ತಾಣಕೆ ಅವರು ಮರಳಿ ಬಂದಾಗ
ತಮ್ಮ ಬದುಕಿನ ಫಲವ
ಹಿಂದೆ ಬಿಟ್ಟು ಬಂದಿದ್ದರವರು.

೮೬

ಸಾವು, ನಿನ್ನ ದೂತನು, ನನ್ನ ಬಾಗಿಲಿಗೆ ಬಂದಿಹನು.
ನಾನರಿಯದ ಅಬ್ಧಿಯನು ದಾಟಿ, ಆತನು
ನಿನ್ನ ಆಣತಿಯನೆನ್ನ ಮನೆಗೆ ತಂದಿಹನು.

ರಾತ್ರಿ ಬಲು ಕಪ್ಪಾಗಿಹುದು, ಭಯವು ತುಂಬಿಹುದೆದೆಯ,
ಆದರೂ, ದೀಪವನು ಹಿಡಿದು, ಬಾಗಿಲನು ತೆರೆದು
ಸ್ವಾಗತಿಸುವೆನಾತನನು.
ನನ್ನ ಬಾಗಿಲಲಿ ನಿಂತಿರುವಾತ ನಿನ್ನ ದೂತನಿಹನು.

ಹನಿದುಂಬಿದೆನ್ನ ಕಂಗಳಿಂದ, ಕೈಮುಗಿದು ಪೂಜಿಸುವೆ.
ನನ್ನ ಹೃದಯ ಭಂಡಾರವನು,
ಆತನಡಿಯಲಿ ಇಟ್ಟು ಪೂಜಿಸುವೆನಾತನನು.

ನನ್ನ ಮುಂಜಾವಿನ ಮೇಲೆ, ಕಪ್ಪು ನೆರಳನು ಬಿಟ್ಟು
ತನ್ನ ಕೆಲಸವಗೈದು ಮರಳಿ ನಡೆಯುವನಾತ
ಶೂನ್ಯವಾಗಿಹ ನನ್ನತನವೊಂದೆ
ಕೊನೆಯ ಕಾಣಿಕೆಯಾಗಿ ನಿನಗರ್ಪಿಸಲು
ಉಳಿಯುವದು ನನ್ನ ಅನಾಥ ಮನೆಯೊಳಗೆ

## ೮೭

ನನ್ನ ಕೋಣೆಗಳ ಮೂಲೆ ಮೂಲೆಗಳಲಿ
ಹತಾಶ ಭಾವದಲಿ ಅವಳಿಗಾಗಿ ಹುಡುಕಾಡುವೆನು.
ಅವಳು ದೊರಕಲಾರಳು ನನಗೆ.

ನನ್ನ ಮನೆ ಚಿಕ್ಕದು
ಏನಾದರೊಂದು ಅಲ್ಲಿಂದ ತೆರಳಿದ ಮೇಲೆ
ಮತ್ತೆ ಮರಳಿ ದೊರಕದದು.

ಆದರೆ ನನ್ನೊಡೆಯ,
ಅನಂತವಾಗಿಹುದು ನಿನ್ನ ಭವನ
ಅವಳ ಹುಡುಕುತ್ತ, ನಿನ್ನ ಬಾಗಿಲಿಗೆ ಬಂದಿಹೆನು ನಾನು.

ನಿನ್ನಾಗಸದ ಸಂಜೆಯ ಹೊನ್ನ ಚಪ್ಪರದ ಅಡಿಯಲಿ ನಿಂತು
ನನ್ನ ತವಕಿಸುವ ಕಂಗಳನು
ನಿನ್ನ ಮೊಗದೆಡೆಗೆ ಎತ್ತುವೆನು.

ಎಲ್ಲಿ ಏನೂ ನಾಶವಾಗದೋ,
ಆ ಶಾಶ್ವತದ ಅಂಚಿಗೆ ಬಂದು ನಿಂತಿಹೆನು.
ಇಲ್ಲಿ ಆಶೆಯಿರದು, ಸಂತಸವಿರದು
ಕಣ್ಣ ಹನಿಗಳ ದಾಟಿ ಕಾಂಬ ಮೊಗವಿರದು.

ಓ ನನ್ನ ದೊರೆಯೇ,
ನನ್ನ ಶೂನ್ಯ ಬದುಕನ್ನು ಆ ಸಾಗರದಿ ಅದ್ದು.
ಅತ್ಯಂತ ಆಳಕ್ಕೆ ತಳ್ಳಿ, ಮುಳುಗಿಸಿದನು.
ನಾ ಕಳೆದುಕೊಂಡ ಸವಿಯಾದ ಸ್ಪರ್ಶವನು
ವಿಶ್ವದ ಸಮಸ್ತತೆಯಲಿ ನಾನು
ಒಮ್ಮೆ ಅನುಭವಿಸುವಂತಾಗಲಿ.

## ೮೮

ಶಿಥಿಲ ದೇಗುಲದೊಳಿಹ ದೈವವೇ,
ವೀಣೆಯ ಹರಿದ ತಂತಿಗಳು

ನಿನ್ನ ಸ್ತುತಿಸಲಾರವೀಗ.
ಸಂಜೆಯಲಿ ನುಡಿವ ಗಂಟೆಗಳು
ಪೂಜೆಯ ಸಮಯವನು ಘೋಷಿಸವು ನೋಡು
ಸ್ತಬ್ಧವಾಗಿಹ ಗಾಳಿ ನಿನ್ನ ಕುರಿತು
ಏನನೂ ನುಡಿಯದೆ ಮೌನವಾಗಿಹುದು.

ನಿನ್ನ ಪಾಳುಬಿದ್ದ ಆವಾಸದಲಿ
ವಸಂತದ ಅಲೆಮಾರಿ ಮಂದಮಾರುತ ಬಂದು,
ನಿನ್ನ ಪೂಜೆಗೆ ಈಗ ಬರದಿಹ
ಕುಸುಮಗಳ ವಾರ್ತೆಯನು ತಹುದು.

ನಿನ್ನ ಹಳೆಯ ಪೂಜಾರಿ
ತನಗೆ ಇನ್ನೂ ದೊರಕದ ಅನುಗ್ರಹಕಾಗಿ
ಸದಾ ಹಂಬಲಿಸುತ್ತ ಅಲೆದಾಡುತಿಹನು.
ಧೂಳಿನ ಮ್ಲಾನತೆಯೊಡನೆ, ನೆರಳು ಬೆಂಕಿಗಳು
ಕೂಡುವ ಸಂಧ್ಯಾಕಾಲದಲಿ
ಹಸಿದ ಹೃದಯವ ಹೊತ್ತು
ಬಹು ಬಳಲಿ ಶಿಥಿಲ ದೇಗುಲಕೆ ಬರುನಾತ.

ಎನಿತೋ ಹಬ್ಬದ ದಿನಗಳು
ಸಂಭ್ರಮವಿರದೇ ಮೌನದಲಿ ಬರುವವು ನಿನ್ನೆಡೆಗೆ.
ಎನಿತೋ ಪೂಜೆಯ ರಾತ್ರಿಗಳು
ದೀಪವನು ಹಚ್ಚದೇ ಉರುಳಿ ಹೋಗುವವು.

ನಿಪುಣ ಕುಶಲಕರ್ಮಿಗಳು,
ಎನಿತೋ ಪ್ರತಿಮೆಗಳ ಸೃಜಿಸಿ,
ಸಮಯ ಬಂದಾಗ,
ವಿಸ್ಮೃತಿಯ ಪವಿತ್ರ ನದಿಗೆ ಕೊಂಡೊಯ್ವರವನು.
ಶಿಥಿಲ ದೇಗುಲದ ದೈವ ಮಾತ್ರ
ಕೊನೆಯಿರದ ಅಲಕ್ಷ್ಯದಲಿ
ಪೂಜೆಯಿರದೇ ನಿಲ್ಲುವದು.

೮೯

'ದೊಡ್ಡ ಧ್ವನಿಯ ಶಬ್ದಗಳಿನ್ನು ಬೇಡ'
ಎಂಬುದೆನ್ನೊಡೆಯನ ಇಚ್ಛೆ.
ಇನ್ನು ಪಿಸುಮಾತಿನಲೆ ವ್ಯವಹರಿಸುವೆ ನಾನು.
ನನ್ನ ಹೃದಯದ ಮಾತುಗಳನಿನ್ನು
ಗುನುಗುನಿಸುವ ಹಾಡುಗಳೊಡನೆ ಕಳಿಸುವೆನಾತನಿಗೆ.

ರಾಜನ ಸಂತೆಗೆ ಜನರು
ಆತುರಾತುರತೆಯಲಿ ಓಡುತಿಹರು.
ಕೊಡುವ ಕೊಳ್ಳುವ ಎಲ್ಲ ಜನರಿಹರಲ್ಲಿ,
ಆದರೆ ನಾನು, ದಟ್ಟ ಕೆಲಸವ ಬಿಟ್ಟು
ನಡು ಹಗಲಿನಲೆ, ವೇಳೆ ಮುಗಿಯುವ ಮುನ್ನವೇ,
ಹೊರಡ ಬೇಕಾಗಿಹುದು.

ಹೂವರಳುವ ಸಮಯ ಬರುವ ಮುನ್ನವೇ
ಹೂಗಳರಳಲಿ ನನ್ನ ತೋಟದಲಿ,
ಮೇಣ್, ಹಗಲ ದುಂಬಿಗಳು
ನೆಮ್ಮದಿಯ ಝೇಂಕಾರಕೆಳಸಲಿ.

ನನ್ನ ಬಹುಪಾಲು ಸಮಯವನು
ಒಳಿತು ಕೆಡುಕುಗಳ ನಡುವಿನ ಹೋರಾಟದಲಿ ಕಳೆದಿಹೆನು.
ಆದರೀಗ,
ನನ್ನ ಶೂನ್ಯ ದಿನಗಳ ಒಡನಾಡಿಯು,
ನನ್ನ ಹೃದಯವ ತನ್ನೆಡೆಗೆ ಸೆಳೆದುಕೊಳ್ಳುವ
ಸಮಯ ಬಂದಿಹುದು.
ಆವ ನಿರುಪಯುಕ್ತ ಅಸಂಗತಕ್ಕೆ
ಈ ಅನಿರೀಕ್ಷಿತ ಕರೆಯೆಂದು ಅರಿಯೆ ನಾನು.

೯೦

ಮೃತ್ಯು ಬಂದು, ನಿನ್ನ ಬಾಗಿಲನು ಬಡಿದಾಗ
ಅವಗೆ ಅರ್ಪಿಸಲು ಏನಿಹುದು ನಿನ್ನ ಬಳಿ?

ಓಹ್, ಆ ನನ್ನ ಅತಿಥಿಯ ಮುಂದೆ
ತುಂಬಿ ತುಳುಕುತಿಹ ನನ್ನ ಜೀವನದ ಪಾತ್ರೆಯನಿಡುವೆ,
ಆತನನು ಹಿಂತಿರುಗಿ ಬರಿಗೈಯಲಿ ಕಳುಹಿಸಲಾರೆ.

ನನ್ನ ಜೀವನದ ಶರದೃತುವಿನ ಎಲ್ಲ ದಿನಗಳಲಿ, ಮೇಣ್,

ನನ್ನ ಜೀವನದ ಗ್ರೀಷ್ಮ ಕಾಲದ ಎಲ್ಲ ರಾತ್ರಿಗಳಲಿ,
ನಾನೇ ಹಿಡಿದಿಟ್ಟ ನನ್ನ ಬದುಕಿನ ಸಿಹಿ ದ್ರಾಕ್ಷಾರಸವನು
ಅವಿಶ್ರಾಂತ ಜೀವನದಿ ಉಳಿಸಿದ ಗಳಿಕೆಯನು
ಮೇಣ್ ಶೇಖರಿಸಿಟ್ಟ ಹಕ್ಕಲನು
ನನ್ನ ದಿನಗಳ ಕೊನೆ ಐತಂದಾಗ,
ಮೃತ್ಯು ಬಂದು ಬಾಗಿಲನು ಬಡಿದಾಗ,
ಆತನೆದುರು ಇರಿಸುವೆನು.

೯೧

ಓ, ಸಾವೆ ನನ್ನ ಬದುಕಿನ ಕೊನೆಯ ಸಾಫಲ್ಯವೇ
ಬಾ, ಬಂದೆನ್ನ ಕಿವಿಯಲ್ಲಿ ಪಿಸುಮಾತನಾಡು!

ದಿನಗಳೆದು ದಿನಬರಲು ಕಾದಿರುವೆ,
ಬದುಕಿನುದ್ದಕೂ ಬಂದ ನೋವು ನಲಿವುಗಳನು
ನಿನಗಾಗಿಯೇ ಸಹಿಸಿಕೊಂಡಿರುವೆ

ನಾನೆಂಬುದೆಲ್ಲ ನನ್ನೊಳಿರುವುದೆಲ್ಲ, ನನ್ನ ಆಶೆಗಳೆಲ್ಲ
ನನ್ನ ಪ್ರೇಮವದೆಲ್ಲ
ಗೌಪ್ಯದಾಳದಲಿ ನಿನ್ನೆಡೆಗೇ ಪರಿದಿಹವು
ನಿನ್ನ ಕಂಗಳಿಂದ ಒಂದು ಕೊನೆಯ ನೋಟವು ಸಾಕು
ಈ ನನ್ನ ಜೀವನವೆ ಶಾಶ್ವತದಿ ನಿನ್ನದಾಗುವದು.

ಹೂಗಳ ಬಳಸಿ ಹೆಣೆದಿರುವ ಹಾರವು
ಸಿದ್ಧವಾಗಿಹುದು ಮದುವಣಿಗನಿಗಾಗಿ
ಮದುವೆಯಾದೊಡನೆ
ಇರುಳಿನೇಕಾಂತದಲಿ, ತನ್ನೊಡೆಯನ ಕೂಡಲು
ತನ್ನ ಮನೆಯನು ತೊರೆವಳು ಮದುವಣಗಿತ್ತಿ.

೯೨

ನಾ ಬಲ್ಲೆ ದಿನವೊಮ್ಮೆ
ನನ್ನ ಕಂಗಳ ಮುಂದೆ ಕೊನೆ ಪರದೆ ಜಾರುವದು,
ಈ ಬುವಿಯ ನೋಟ ಶಾಶ್ವತದಿ ಮರೆಮಾಚಿ
ಜೀವ ಮೌನದಲಿ ನಿರ್ಗಮಿಸುವದು.

ಆದರೂ ಎಂದಿನೊಲು ಮುಂದುವರೆವವು
ಸೂರ್ಯೋದಯಾಸ್ತಮಾನ
ಮೇಣ್ ನಿಶೆಯ ನಕ್ಷತ್ರ ಕಾವಲು.
ನೋವು ನಲಿವುಗಳ ಹೊತ್ತ ಘಳಿಗೆ ಘಳಿಗೆಗಳು
ನಿಡಿಸುಯ್ಯುತ್ತ ನಡೆವವು ಅಂಬುಧಿಯ ತೆರೆಗಳೊಲು.

ನನ್ನ ಜೀವನದ ಕೊನೆಯ ಕ್ಷಣಗಳನು ನೆನೆದಾಗ,
ಈ ಕ್ಷಣದ ಅಡೆತಡೆಯ
ಗೋಡೆಗಳೊಡೆಯುವವು.
ಸಾವು ಚೆಲ್ಲುವ ಬೆಳಕಿನಡಿಯಲ್ಲಿ
ಕಣ್ಣು ಕೋರೈಸುವದು

-

ಎಲ್ಲರುಪೇಕ್ಷಿಸಿದ ಜಗದ ಸಂಪತ್ತು
ಯಾವುದುನ್ನತವಿಲ್ಲಿ? ಕೀಳಾವುದು?

ಸ್ವಾರ್ಥಕ್ಕೆ ಗಳಿಸಿದ ವ್ಯರ್ಥದಲಿ ಹಲುಬಿದ
ಅರ್ಥವಿಲ್ಲದ ವಸ್ತುಗಳು ಮರೆತು ಬಿಡಲೀಗ.
ಜಾರಿ ಹೋಗುವ ನಿಜದ ಅಲೆಗಾಗಿ, ನೆಲೆಗಾಗಿ
ತವಕಿಸುವೆನೀಗ.
ಈ ತನಕ ನಿರ್ಲಕ್ಷಿಸಿದ, ನಿಜದೆಳೆಗಳನು
ಹಿಡಿದುಕೊಳ್ಳುವೆನೀಗ.

೯೩

ನಾನು ಹೊರಡುತಿಹೆ ಸೋದರರೆ!
ನನಗೆ ಶುಭವ ಹಾರೈಸಿ.
ನಿಮಗೆಲ್ಲರಿಗೂ ನಮಿಸಿ, ನಿಮ್ಮಿಂದ
ಬೀಳ್ಕೊಳ್ಳುತಿರುವೆ

ತೆಗೆದುಕೊಳ್ಳಿ, ನನ್ನ ಮನೆಯ ಬೀಗದ ಕೈಗಳನು.
ಈ ಮನೆಯ ಮೇಲಿನ ನನ್ನೆಲ್ಲ ಹಕ್ಕುಗಳನು
ಬಿಟ್ಟುಕೊಟ್ಟಿಹೆ ನಾನು.
ಕರುಣೆ ತುಂಬಿದ ಕೊನೆಯ ನುಡಿಗಳನು ಮಾತ್ರ
ಕೊಡಿರೆಂದು ನಿಮ್ಮ ಕೇಳುತಿಹೆನು

ಬಹು ಸಮಯದಿಂದ,
ನಾವು ನೆರೆಹೊರೆಯರಾಗಿಹೆವು, ಆದರೆ
ನಾನು ಕೊಟ್ಟಿರುವದಕ್ಕಿಂತಲೂ
ನಿಮ್ಮಿಂದ ಪಡೆದಿರುವದೇ ಹೆಚ್ಚು
ಈಗ ದಿನಕರನುದಯಿಸಿಹನು,
ಈವರೆಗೆ ನನ್ನ ಕತ್ತಲಿನ ಮೂಲೆಯನು
ಬೆಳಗಿದ ದೀಪ ಶಾಂತವಾಗಿಹುದು.
ಕರೆಯು ಬಂದಿಹುದೆನಗೆ
ನನ್ನ ಪಯಣಕ್ಕೆ ಸಿದ್ಧನಾಗಿಹೆನು.

೯೪

ಸಖರೆ, ಅಗಲುವ ಈ ವೇಳೆಯಲಿ
ನನಗೆ ಶುಭವಹಾರೈಸಿ.
ಅರುಣೋದಯದ ಹೊನ್ನ ಹೊನಲಿನಲಿ
ತೊಯ್ದಿಹುದು ಬಾನು, ಮೇಣ್,
ನನ್ನ ಪಥವು ರಮ್ಯತೆಯಲಿ ಕಂಗೊಳಿಸುತಿಹುದು.

ಅಲ್ಲಿಗೊಯ್ಯಲು ಏನಿಹುದೆಂದು ಕೇಳದಿರಿ ನನ್ನ.
ಶುಭದ ನಿರೀಕ್ಷೆಯನೆನ್ನ ಹೃದಯದೊಳು ಹೊತ್ತು
ರಿಕ್ತ ಹಸ್ತದಲಿ ಪಯಣಕುಪಕ್ರಮಿಸುವೆನು.

ಮದುವೆಯ ಹಾರವನು ಧರಿಸುವೆನು ನಾನು,
ಪಯಣಿಗನ ಕೆಂಬಣ್ಣದುಡುಪಲ್ಲ ನನ್ನದು

ಬಲು ಅಪಾಯದ ದಾರಿಯಾದರೂ
ಭಯವಿಲ್ಲ ನನ್ನ ಮನದೊಳಗೆ.

ನನ್ನ ಪಯಣವು ಕೊನೆಗೊಂಡಾಗ
ಸಂಜೆಯ ತಾರೆಗಳುದಯಿಸುವವು
ಮುಚ್ಚಂಜೆಯ, ದುಃಖತುಂಬಿದ ಇಂಪಾದ ಸ್ವರಗಳು
ಹೊರಡುವವು ರಾಜನ ಹೆಬ್ಬಾಗಿಲಿನಿಂದ.

೯೫

ಈ ಬದುಕಿನ ಹೊಸ್ತಿಲನು,
ಮೊದಲ ಬಾರಿಗೆ ನಾನು ದಾಟಿದ ಚಣವು,
ಆವುದೆಂದು ನಾನು ಅರಿತಿರಲಿಲ್ಲ,

ದಟ್ಟಡವಿಯ ನಟ್ಟಿರುಳಿನಲಿ
ಬಿರಿವ ಮೊಗ್ಗಿನಂದದಿ,
ಈ ನಿಗೂಢ ವೈಶಾಲ್ಯಕೆ
ನನ್ನನು ತಳ್ಳಿದ ಶಕ್ತಿಯಾವದು?

ಬೆಳಕಿಗೆ ನಾನು ಕಣ್ತೆರೆದಾಕ್ಷಣವೆ
ಈ ಜಗಕೆ ಅಪರಿಚಿತನಲ್ಲ, ಎಂಬುದನು ಮನಗಂಡೆ.
ಹೆಸರಿರದ, ರೂಪವಿರದ, ಆ ನಿಗೂಢತೆಯು
ನನ್ನ ತಾಯಿಯ ರೂಪದಲಿ
ತನ್ನ ತೋಳ್ತೆಕ್ಕೆಯಲಿ
ನನ್ನ ಬಂಧಿಸಿದುದ ಕಂಡೆ.

ಅದೇ ತೆರನ, ನನ್ನ ಸಾವಿನಲಿ,
ಅದೇ ಅಪರಿಚಿತ ನಿಗೂಢತೆಯು
ನನಗೆ ಚಿರಪರಿಚಿತವಾದ ರೂಪದಲಿ
ನನ್ನೆದುರು ನಿಲ್ಲುವದು.

ಈ ಜೀವನವ ನಾ ಪ್ರೀತಿಸುವೆನದರಿಂದ
ಸಾವನೂ ಪ್ರೀತಿಸಬೇಕೆಂಬುದನು ಬಲ್ಲೆ ನಾನು.

ತಾಯಿ, ತನ್ನ ಬಲ ಮೊಲೆಯ ಕಸಿದುಕೊಂಡಾಗ
ಅಳುವದು ಮಗು, ಆದರೆ,
ಮರು ಚಣವೆ, ಎಡ ಮೊಲೆಯಲಿ
ಸಾಂತ್ವನವ ಪಡೆಯುವದು.

೯೬

ನಾನು ಇಲ್ಲಿ ಕಂಡಿದ್ದನ್ನು
ಮೀರಿಸುವಂತಹದು, ಎಲ್ಲಿಯೂ ಇರದು,
ಎಂಬುದೇ,
ನಾನು ಇಲ್ಲಿಂದ ಹೊರನಡೆದಾಗ,
ನಿಮಗೆ ಹೇಳುವ ನನ್ನ ಬೀಳ್ಕೊಳ್ಳುವ ಮಾತು.

ಬೆಳಕಿನ ಮಹಾಸಾಗರದ ಮೇಲೆ
ಅರಳಿ ಹಬ್ಬುವ ನೈದಿಲೆಯೊಳು ಬಚ್ಚಿಟ್ಟ
ಮಧುವಿನ ರುಚಿಯ ನೋಡಿಹೆನು.
ಇದು ನಿಮ್ಮಿಂದ ಬೀಳ್ಕೊಳ್ಳುವ ನನ್ನ ಮಾತು.

ಅಗಣಿತ ರೂಪಗಳ ಈ ಆಟದ ಮನೆಯಲಿ
ನನ್ನ ಆಟವನಾಡಿ,
ಆ ಅರೂಪನ ಸ್ವರೂಪವನು ಕಂಡೆನಾನು.

ಸ್ಪರ್ಶಕೆ ದಕ್ಕದ, ಆತನ ಸ್ಪರ್ಶದಿಂದ
ನನ್ನ ದೇಹ, ಅಂಗಾಂಗಗಳೆಲ್ಲ
ಪುಳಕಗೊಂಡಿಹವು.
ಇಲ್ಲಿ ನನ್ನ ಕೊನೆ ಬರುವುದಾದರೆ ಬಂದು ಬಿಡಲಿ
ಇದು ನಿಮ್ಮಿಂದ ಬೀಳ್ಕೊಳ್ಳುವ ನನ್ನ ಮಾತು.

೯೭

ನನ್ನ ಆಟ ನಿನ್ನೊಡನಿದ್ದಾಗ
ನೀನಾರೆಂದು ನಾ ಕೇಳಲಿಲ್ಲ.
ನಾನು ನಾಚುತ್ತಿರಲಿಲ್ಲ, ಹೆದರುತ್ತಿರಲಿಲ್ಲ
ನನ್ನ ಜೀವನವು ಅಬ್ಬರಿಸುತ್ತಿರುವ ಓಘವಾಗಿತ್ತು.

ಮುಂಬೆಳಗಿನ ನನ್ನ ನಿದ್ದೆಯಲಿ
ನನ್ನನು ಜೊತೆಗಾರನಂತೆ ಕರೆದು
ಕಾನ ಮಧ್ಯದಲಿಹ ಬಯಲಿನಿಂ ಬಯಲಿಗೆ
ಓಡೋಡುತ ಕರೆದೊಯ್ಯುತ್ತಿದ್ದೆಯನ್ನ.

ಆ ದಿನಗಳಲಿ, ನೀನೆನಗೆ ಹೇಳಿದ
ಹಾಡುಗಳ ಅರ್ಥವನರಿತುಕೊಳುವ

ಗಮನವಿರಲಿಲ್ಲವೆನಗೆ.
ನನ್ನ ಧ್ವನಿಮಾತ್ರ ಆ ರಾಗಗಳ ಕಲಿಯಿತು.
ನನ್ನ ಹೃದಯ, ಆ ರಾಗಗಳ ಇಂಪಿಗೆ ನಲಿಯಿತು.

ಈಗ, ಆಟದ ಸಮಯ ಮುಗಿದಿರುವಾಗ,
ಥಟ್ಟನೇ ನನಗೆ ಬಂದ
ಹೊಸದೃಷ್ಟಿ ಇದೇನು?
ತನ್ನೆಲ್ಲ ಮೌನ ತಾರೆಗಳೊಡನೆ
ತನ್ನ ದೃಷ್ಟಿಯನು ನಿನ್ನ ಪಾದಗಳಲಿ ನೆಟ್ಟು
ಈ ಜಗವೆ, ಭಯಭಕ್ತಿಯಲಿ ಬಾಗಿ ನಿಂತಿಹುದು.

೯೮

ನನ್ನ ಸೋಲಿನ ಕಾಣಿಕೆಗಳಿಂ,
ಮೇಣ್ ಹಾರಗಳಿಂ, ನಿನ್ನನಾದರಿಸುವೆ.
ಸೋಲಿನಿಂದ ತಪ್ಪಿಸಿ ಕೊಳುವದು
ನನ್ನಳವಿನಲ್ಲಿಲ್ಲ.

ನಾ ಬಲ್ಲೆ
ನನ್ನ ಹಮ್ಮು, ಮೂಲೆಯನು ಸೇರುವದು.
ನನ್ನ ಪ್ರಾಣವು ಅತಿಶಯದ ನೋವಿನಿಂ
ಬಂಧನಗಳನೆಲ್ಲ ಭೇದಿಸುವದು.
ನನ್ನ ಹೃದಯ

ಪೊಳ್ಳಾದ ಕೊಳಲಿನಂದದಿ,
ಹಲವು ರಾಗಗಳ ಬಿಕ್ಕಳಿಸುವದು.

ನಾ ಬಲ್ಲೆ ದೃಢವಾಗ್ಗಿ,
ನೂರು ದಳಗಳ ಕಮಲ
ಮುಚ್ಚಿಕೊಂಡಿರದು ಕೊನೆಯೊರೆಗು.
ಗೌಪ್ಯ ಗೂಡಿನಲಿಹ ಆದರ ಮಧುವು
ಅನಾವೃತಗೊಂಡು ಪ್ರಕಟವಾಗುವದು.

ನೀಲ ಬಾನಿನಿಂ ಕಣ್ಣುಗಳೆನ್ನೆಡೆಗೆ ದೃಷ್ಟಿಯನುಬೀರಿ
ಕರೆವವೆನ್ನ ಮೌನ ಸನ್ನೆಯಲಿ.
ಏನೊಂದೂ ಉಳಿದಿರದು ನನಗಾಗಿ ಆಗ
ಕೇವಲ ಸಾವೊಂದನೆ ನಿನ್ನಡಿಗಳಲಿ ಪಡೆದುಕೊಳ್ಳುವೆನು.

೯೯

ನನ್ನ ಚುಕ್ಕಾಣಿಯನು ನಾ ಬಿಟ್ಟಾಗ
ಅದನು ನೀನು ಹಿಡಿವ ಸಮಯ ಐತಂದಿತೆಂದು
ನಾನರಿವೆ ನನ್ನೊಡೆಯ.
ಏನು ಮಾಡಲುಳಿದಿಹುದೋ,
ಅದು ಆ ಕ್ಷಣವೆ ನೆರವೇರುವದು,
ವ್ಯರ್ಥವೀ ಹೋರಾಟ.

ಅಂತಲೇ, ಎನ್ನ ಹೃದಯವೆ,
ನಿನ್ನ ಕೈಗಳ ಚಲ್ಲು, ಮೇಣ್,

ಮೌನದಲಿ ಸೋಲನೊಪ್ಪಿ ಸಹಿಸಿಕೊ.
ನೀನೆಲ್ಲಿರಿಸಲ್ಪಟ್ಟಿಹೆಯೋ
ಅಲ್ಲಿಯೇ, ಸಂಪೂರ್ಣ ನಿಶ್ಚಲ ಶಾಂತಿಯಲಿ ಕುಳ್ಳಿರು.
ನಿನಗದೇ ಶ್ರೇಯಸ್ಕರ.

ಈ ನನ್ನ ದೀಪಗಳು
ಗಾಳಿಯ ಪ್ರತಿ ಕಿರು ಅಲೆಗೆ ನಂದಿಹೋಗುವವು,
ಅವನು ಮರಮರಳಿ ಹಚ್ಚುವ ಯತ್ನದಲಿ
ನಾನೆಲ್ಲವನು ಮರೆಯುತಿಹೆನು.

ಆದರೀಗ ಜಾಣನಾಗುವೆ ನಾನು
ನೆಲದ ಮೇಲೆ ಹಾಸನು ಹಾಸಿ
ಕಾಯುವೆನು, ಕತ್ತಲಲಿ ನಿನಗಾಗಿ ನನ್ನೊಡೆಯ.
ನಿನ್ನಿಚ್ಛೆ ಬಂದಾಗ, ಮೌನದಲಿ ಬಂದು
ನಿನ್ನಾಸನವ ಸ್ವೀಕರಿಸು.

೧೦೦

ಅಚ್ಯುತ ಅರೂಪವಾದ ಮುತ್ತನು ಪಡೆವಾಶೆಯಲಿ
ರೂಪಗಳ ಸಾಗರದ ಆಳಕ್ಕೆ ಇಳಿಯುವೆ.

ಗಾಳಿಗೊಡೆವ ಈ ನೌಕೆಯಲಿ ಇನ್ನು
ದಡದಿಂದ ದಡಕೆ ತೇಲಲಾರೆ.
ತೆರೆಗಳ ತುದಿಯ ಮೇಲೆ ಆಟವಾಡುವ
ದಿನಗಳುಳಿದಿಲ್ಲವೀಗ.

ಸಾವಿಲ್ಲದ ಬದುಕಿಗಾಗಿ
ಸಾವ ತವಕ ನನಗೀಗ.

ನನ್ನ ಜೀವದ ತಂತಿವಾದ್ಯವನು
ಅಂತ್ಯವಿಲ್ಲದ ಆಳದ ಸಂಗೀತದುಂಬಿದ
ದಿವ್ಯ ಮಂದಿರಕ್ಕೊಯ್ಯುವೆನು, ಮೇಣ್
ಅನಂತದ ಶೃತಿಗೆ ಈ ವಾದ್ಯದ ಶೃತಿಯ
ಮೇಳೈಸಿ ನುಡಿಸುವೆನು. ಇದರ
ಕೊನೆಯ ಸ್ವರ ನುಡಿದು
ವಾದ್ಯ ಮೌನವಾದೊಡನೆ
ನಿಶ್ಯಬ್ಧದ ಅಡಿಗಳಿಗೆ ಅರ್ಪಿಸುವೆನಿದನು.

೧೦೧

ನನ್ನ ಹಾಡುಗಳೊಳಗೆ,
ನನ್ನ ಜೀವನದಿ, ಸದಾ, ನಿನ್ನನರಸುತಿಹೆನು.
ಈ ನನ್ನ ಹಾಡುಗಳೆ,
ಬಾಗಿಲಿನಿಂ, ಬಾಗಿಲಿಗೆ ನನ್ನ ಕರೆದೊಯ್ದಿಹವು.
ಈ ಹಾಡುಗಳಿಂದಲೇ,
ನನ್ನ ಜಗವ ಹುಡುಕುತ, ಸ್ಪರ್ಶಿಸುತ
ನನ್ನ ಅಸ್ತಿತ್ವವ ನಾನನುಭವಿಸಿಹೆನು.

ನಾ ಕಲಿತ ಪಾಠಗಳನೆಲ್ಲ
ನನ್ನ ಹಾಡುಗಳೆ ನನಗೆ ಕಲಿಸಿಹವು.

ಅವುಗಳೇ ನನಗೆ ಗುಪ್ತ ಮಾರ್ಗಗಳನರುಹಿದವು
ನನ್ನ ಹೃದಯದ ಕ್ಷಿತಿಜದ ಮೇಲೆ
ಎನಿತೋ ನಕ್ಷತ್ರಗಳ ತಂದು
ನನ್ನ ದೃಷ್ಟಿಗೆ ಗೋಚರಿಸುವಂತೆ ಮಾಡಿಹವು.

ದಿನವಿಡೀ ನಡೆದ ದಾರಿಯಲಿ
ನೋವು ನಲಿವುಗಳ ಈ ಜಗದ ಗೂಢತೆಯೆಡೆಗೆಲ್ಲ
ಈ ಹಾಡುಗಳೆ ನನ್ನ ಕೊಂಡೊಯ್ದಿಹವು.
ಕೊಟ್ಟ ಕೊನೆಗೆ, ಈ ಸಂಜೆಯ ಸಮಯದಿ
ಪಯಣದಂತ್ಯದಲಿ
ಆವ ರಾಜಭವನದ ಹೆಬ್ಬಾಗಿಲಿಗೆ
ನನ್ನ ಕರೆತಂದಿಹವು?

೧೦೨

ನಿನ್ನ ನೋಡಿಹೆನೆಂದು, ಜನರೆಲ್ಲರೆದುರು
ಜಂಭದಲಿ ನುಡಿದೆ.
ನನ್ನೆಲ್ಲ ಕೆಲಸದಲಿ
ನಿನ್ನ ಚಿತ್ರವನವರು ಕಾಣುತಿಹರು.
ಬಂದೆನಗೆ ಕೇಳ್ವರವರು "ಆತನಾರು?"
ಉತ್ತರಿಸಲರಿಯದೇ "ನಾ ಹೇಳಲರಿಯೆ" ಎಂಬೆ.
ಅಪಹಾಸ್ಯವಗೈದು, ನನ್ನ ತೆಗಳಿ,

ಹೊರಟು ಹೋಗುವರವರು
ನೀನು ಮುಗುಳ್ನಗುತ, ಅಲ್ಲಿಯೇ ಕುಳಿತಿರುವೆ.

ನಾ ಹೆಣೆದ ನಿನ್ನ ಕಥೆಗಳನು
ಸ್ಥಿರವಾಗಿ ನಿಲ್ಲುವ ಹಾಡುಗಳನಾಗಿಸಿಹೆ.
ನಿಗೂಢತೆಯು ಎನ್ನ ಹೃದಯದಿಂದ
ಹೊರಚಿಮ್ಮುತಿಹುದು.
ನನ್ನೆಡೆಗೆ ಬಂದು ಕೇಳ್ವರವರು -
''ನಿನ್ನ ಬರಹಗಳೆಲ್ಲವುಗಳ
ಅರ್ಥವನು ಹೇಳೆಮಗೆ''
ಉತ್ತರಿಸಲರಿಯದೆ,
''ಆಹ್ ಅವುಗಳ ಅರ್ಥಗಳನಾರು ಬಲ್ಲರು?'' ಎಂಬೆ.
ಅಪಹಾಸದ ನಗೆನಕ್ಕು
ಹೊರಟು ಹೋಗುವರವರು
ನೀನು ಮುಗುಳ್ನಗುತ ಅಲ್ಲಿಯೇ ಕುಳಿತಿರುವೆ.

೧೦೩

ನನ್ನೆಲ್ಲ ಇಂದ್ರಿಯಗಳು ಹೊರಚಾಚಿ
ನನ್ನೊಂದು ನಮನವಾಗಿ
ನಿನ್ನಡಿಗಳಲಿಹ ಈ ಜಗವ ಮುಟ್ಟಿ
ನಿನ್ನ ನಮಿಸಲಿ ನನ್ನೊಡೆಯ.

ಉದುರದ ನೀರಿನ ಭಾರವ ಹೊತ್ತು
ಇಳಿಬಿದ್ದ ಶ್ರಾವಣದ ಮೋಡಗಳಂದದಿ
ನನ್ನೆಲ್ಲ ಮನ ನಿನ್ನ ಬಾಗಿಲಿಗೆ ಬಾಗಿ,
ನನ್ನೊಂದು ನಮನವಾಗಿ,
ನಿನ್ನ ನಮಿಸಲಿ ನನ್ನೊಡೆಯ.

ನನ್ನೆಲ್ಲ ಹಾಡುಗಳ ಬಗೆಬಗೆಯ ಝರಿಗಳು
ಒಟ್ಟಾಗಿ, ಒಂದೆ ಪ್ರವಾಹವಾಗಿ
ಶಾಂತಿಸಾಗರದೆಡೆಗೆ ಹರಿಯುತ,
ನನ್ನೊಂದು ನಮನವಾಗಿ,
ನಿನ್ನ ನಮಿಸಲಿ ನನ್ನೊಡೆಯ.

ಮನೆಯ ಹಂಬಲದಿಂದೆ
ದೂರ ಗಿರಿಯಲಿಹ ಗೂಡನು ಸೇರೆ
ಹಗಲಿರುಳು ಹಾರುತಿಹ ಹಕ್ಕಿಗಳಂದದಿ
ನನ್ನೆಲ್ಲ ಜೀವನವು
ತನ್ನನಂತದ ತಾಣದೆಡೆ,
ಯಾನವನು ಕೈಗೊಂಡು,
ನನ್ನೊಂದು ನಮನವಾಗಿ,
ನಿನ್ನ ನಮಿಸಲಿ ನನ್ನೊಡೆಯ.

---

# ಅನುಕ್ರಮಣಿಕೆ

ಗೀತಾಂಜಲಿ



ಸಾಹಿತ್ಯಕ್ಕೆ ಮೀಸಲಾದ ನೊಬೆಲ್ ಬಹುಮಾನವನ್ನು ಭಾರತಕ್ಕೆ ತಂದುಕೊಟ್ಟು ಅಂತಾರಾಷ್ಟ್ರೀಯ ಖ್ಯಾತಿಯನ್ನು ಪಡೆದ ವಿಶ್ವಕವಿ ರವೀಂದ್ರರು ಭಾರತದ ಜೀವಮುಖೀ ಪರಂಪರೆಯ ಹಾದಿಯಲ್ಲಿ ಮುಖ್ಯ ಮೈಲುಗಲ್ಲು. ಅವರ 'ಗೀತಾಂಜಲಿ' ವೈಯಕ್ತಿಕತೆಯ ಎಲ್ಲೆಯನ್ನು ಮೀರಿ, ದೇಶ-ಕಾಲ-ಭಾಷೆ-ಧರ್ಮ-ಸಂಸ್ಕೃತಿಗಳ ಕ್ಷಿತಿಜಗಳನ್ನು ವಿಸ್ತರಿಸುವ ಸಮಷ್ಟಿ ಧ್ವನಿಯಾಗಿದೆ.

ನಮ್ಮ ದೇಶದ ಪ್ರಾಚೀನತೆಯು ಇಪ್ಪತ್ತನೆಯ ಶತಮಾನದ ಆಧುನಿಕತೆಗೆ ಮುಖಾಮುಖಿಯಾಗುವ ಸಂಕ್ರಮಣ ಸನ್ನಿವೇಶದಲ್ಲಿ 'ನವ ಮಾನವ'ನ ಆತ್ಮನಿವೇದನೆಯಾಗಿ ಹೊರಹೊಮ್ಮಿದ್ದು 'ಗೀತಾಂಜಲಿ'.

ಮೂಲ ಕವಿತೆಗಳ ಆಶಯ ಮತ್ತು ಅಭಿವ್ಯಕ್ತಿಗೆ ಧಕ್ಕೆ ಉಂಟಾಗದ ರೀತಿಯಲ್ಲಿ ಮಹಿಪಾಲ ದೇಸಾಯಿಯವರ ಕನ್ನಡ ಅನುವಾದಗಳು ರೂಪುಗೊಂಡಿವೆ. ಮುದ್ದಣನ ರೀತಿಯಲ್ಲಿ, ಅಥವಾ ರಾಮಾಯಣ ದರ್ಶನಂ ಬರೆದ ಕುವೆಂಪು ರೀತಿಯಲ್ಲಿ ಹಳಗನ್ನಡದ ಛಾಯೆ ಇದ್ದರೂ ಈ ಅನುವಾದಗಳ ಭಾಷೆ ಸರಳ ಮತ್ತು ಪಾರದರ್ಶಕ.

ಮಹಿಪಾಲರ ಈ ಅನುವಾದ ಕೃತಿ, ಅವರು ಶ್ರದ್ಧೆಯಿಂದ ಕೈಕೊಂಡ ಪ್ರೀತಿಯ ಕಾಯಕ. ಅವರ ಹುಡುಕಾಟದ ಹಾದಿಯಲ್ಲಿ ಇದೊಂದು ಅರ್ಥಪೂರ್ಣ ಮಜಲು. ಇಂಥ ಅನೇಕ ಮಜಲುಗಳನ್ನು ದಾಟುವ ನಿರಂತರ ದಾರಿ ಅವರದಾಗಿರಲಿ.

— ಚಂಪಾ